ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-14 May - 2016 Issue No. 05 ₹ 10/-



ದಿನಾಂಕ 09 ಮೇ 2016ರಂದು ಕರ್ನಾಟಕ ಸರ್ಕಾರ 'ಮೈಸೂರಿನ ಕಲಾಭವನ'ದಲ್ಲಿ ಏರ್ಪಡಿಸಿದ್ದ "ಬಸವ ಜಯಂತಿ" ಸಮಾರಂಭದಲ್ಲಿ ಡಾ. ಗೊ.ರು. ಚನ್ನಬಸಪ್ಪ ಅವರಿಗೆ ರಾಜ್ಯ ಸರ್ಕಾರದ "ಬಸವ ರಾಷ್ಟ್ರೀಯ ಪುರಸ್ಕಾರ-2015"ನ್ನು ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರು ಪ್ರಧಾನ ಮಾಡಿದರು. ಸಚಿವರುಗಳಾದ ಸನ್ಮಾನ್ಯ ಶ್ರೀ ವಿ. ಶ್ರೀನಿವಾಸಪ್ರಸಾದ್, ಶ್ರೀಮತಿ ಉಮಾಶ್ರೀ, ಶ್ರೀ ಎಚ್.ಎಸ್. ಮಹಾದೇವ ಪ್ರಸಾದ್, ಸುತ್ತೂರು ಮಠಾಧ್ಯಕ್ಷರಾದ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಮಾಜಿ ಸಚಿವರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರುಗಳು ಚಿತ್ರದಲ್ಲಿದ್ದಾರೆ.



05 ರಿಂದ 07 ಮೇ 2016ರ ವರೆಗೆ ಊಟಿಯಲ್ಲಿ ಜರುಗಿದ ರಾಜ್ಯ ಮಟ್ಟದ ತರಬೇತುದಾರರ ಸಮಾವೇಶದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರೊಂದಿಗೆ ತರಬೇತುದಾರರು ಹಾಗೂ ರಾಜ್ಯ ಗೈಡ್ಸ್ ಆಯುಕ್ತೆ ಶ್ರೀಮತಿ ಗೀತಾ ನಟರಾಜ್, ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌ) ಶ್ರೀ ಚಿನ್ನಸ್ವಾಮಿರೆಡ್ಡಿ, ಸಹಾಯಕ ರಾಜ್ಯ ಆಯುಕ್ತರುಗಳಾದ ಶ್ರೀ ಎಂ.ಎಂ. ಲೋಂಡೆ, ಶ್ರೀಮತಿ ಎನ್.ಕೆ. ಛಾಯ ಶ್ರೀಮತಿ ಬಿ.ಡಿ. ಶಾಂತ, ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ಎಲ್.ಟಿ. ಲೋಕೇಶ್, ಶ್ರೀಮತಿ ಕೆ.ವಿ. ಶ್ಯಾಮಲ ಚಿತ್ರದಲ್ಲಿದ್ದಾರೆ.





ದಿನಾಂಕ 15 ರಿಂದ 19 ಏಪ್ರಿಲ್ ವರೆಗೆ ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಆಯೋಜಿಸಿದ್ದ ತೃತೀಯ ಸೋಪಾನ ಪರೀಕ್ಷಾ ಶಿಬಿರದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಸ್ಕೌಟ್ಸ್ – ಗೈಡ್ಸ್‌ಗಳನ್ನು ಉದ್ದೇಶಿಸಿ ಮತನಾಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಆಯುಕ್ತ ಶ್ರೀ ಪಿ. ಪಳನಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್, ಜಿಲ್ಲಾ ತರಬೇತಿ ಆಯುಕ್ತ ಶ್ರೀ ಟಿ.ಕೆ. ನಾರಾಯಣಸ್ವಾಮಿ ಮತ್ತು ಸ್ಕೌಟ್ಸ್–ಗೈಡ್ಸ್‌ಗಳನ್ನು ಕಾಣಬಹುದು.



ಮೈಸೂರು ಜಿಲ್ಲೆ ನಂಜನಗೂಡಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕ ಉದ್ಘಾಟನಾ ಸಮಾರಂಭದಲ್ಲಿ ಮೈಸೂರು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ರೋವರ್ಸ್ ರೇಂಜರ್ಸ್‌ಗಳು ಚಿತ್ರದಲ್ಲಿದ್ದಾರೆ.

24 ಮೇ 2016ರಂದು ಹಾಸನ ಜಿಲ್ಲೆ ಅರಸೀಕೆರೆ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ಜರುಗಿದ ಸ್ಕೌಟಿಂಗ್ ಗೈಡಿಂಗ್ "ಪರಿಚಯಾತ್ಮಕ ಶಿಬಿರ"ದ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ನಟರಾಜ್, ಉಪಾಧ್ಯಕ್ಷರುಗಳಾದ ಶ್ರೀ ಲಕ್ಷ್ಮಣ್ ಎಮ್. ಬಳೂಟಗಿ, ಬಿಆರ್‌ಸಿ ಮತ್ತು ಶ್ರೀ ತಿಮ್ಮೇಶ್, ಟಿಪಿಇಒ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಲೀಲಾ ಮಹೇಶ್ವರ್, ಶ್ರೀಮತಿ ಬಿ. ಕಾಮೇಶ್ವರಿ, ಡಿ.ಟಿ.ಸಿ(ಗೈ) ಅವರುಗಳು ಚಿತ್ರದಲ್ಲಿದ್ದಾರೆ.



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly Published by
**The Bharat Scouts & Guides, Karnataka**
State Headquarters, Shanthigruha
# 39, Palace Road, Bengaluru-560 001
Tel : 080-2226 0017, 2226 7470




## ಪರಿವಿಡಿ




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ
# 39, ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017 - 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.


**ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ**

**www.bsgkarnataka.org**

**www.kondajjibasappa.org**

## ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ವಾರ್ಷಿಕ ಪರೀಕ್ಷೆಗಳು ಮುಗಿದು, ಫಲಿತಾಂಶಗಳು ಬರುತ್ತಿದೆ. ವಿದ್ಯಾರ್ಥಿಗಳ ಹಲವಾರು ತಿಂಗಳುಗಳ ತಯಾರಿ, ಅಧ್ಯಯನ ಮತ್ತು ಪೋಷಕರ ತವಕ ತಲ್ಲಣಗಳ ನಡುವೆ ಶ್ರಮ ಹಾಗೂ ಸಾಧನೆಯ ಪ್ರತೀಕವಾಗಿ ಫಲಿತಾಂಶಗಳು ರೂಪುಗೊಂಡಿದೆ. ವೈಯಕ್ತಿಕ ಸಾಧನೆಗೆ ಹಲವಾರು ಅಳತೆಗೋಲುಗಳಾದರೆ ಸಾಮೂಹಿಕ ಸಾಧನೆಯ ಮಾನದಂಡಗಳು ಬೇರೆಯೇ ಆಗಿರುತ್ತದೆ. ಸಾಮಾಜಿಕ ಪ್ರಗತಿಗೆ ವೈಯಕ್ತಿಕ ಮತ್ತು ಸಾಮೂಹಿಕ ಕ್ರಿಯೆಗಳು ರಚನಾತ್ಮಕವಾಗಿ, ಪರಸ್ಪರ ಪೂರಕವಾಗಿ ಸಂಮಿಳಿತಗೊಳ್ಳಬೇಕು. ಆಗಮಾತ್ರ ವ್ಯಕ್ತಿ ಮತ್ತು ಸಮಾಜದ ಪ್ರಗತಿ ಸಾಧ್ಯವಾಗುತ್ತದೆ.

ಈ ಬಾರಿಯ ಎಸ್.ಎಸ್.ಎಲ್.ಸಿ ಪರೀಕ್ಷೆಯ ಫಲಿತಾಂಶ ಹೊರಬಿದ್ದಿದೆ. ಹೋದ ವರ್ಷ 81.82% ರಷ್ಟು ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದರೆ, ಈ ಬಾರಿಯ ಫಲಿತಾಂಶ 79.16%. ಸರ್ಕಾರವು ಈ ಫಲಿತಾಂಶ ಕುಸಿತವನ್ನು ವಿಶ್ಲೇಷಣೆ ಮಾಡಿ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದಾಗಿ ಹೇಳಿದೆ. ಇದು ಸ್ವಾಗತಾರ್ಹ.

ಎಂದಿನಂತೆ ವಿದ್ಯಾರ್ಥಿನಿಯರ ಮೇಲುಗೈ. ಗ್ರಾಮೀಣ ಪ್ರದೇಶಗಳ ಫಲಿತಾಂಶವು ನಗರ ಪ್ರದೇಶಕ್ಕಿಂತ ಉತ್ತಮವಾಗಿದೆ. ಭದ್ರಾವತಿಯ ಕುಮಾರ ಡಿ.ಎಸ್.ರಂಜನ್ 625ಕ್ಕೆ 625 ಪೂರ್ಣಾಂಕಗಳನ್ನು ಪಡೆದು ದಾಖಲೆ ಸ್ಥಾಪಿಸಿದ್ದಾನೆ. ಸಿರಸಿ ತಾಲ್ಲೂಕಿನ ಹುಲ್ಲೇಕಲ್ಲು ಗ್ರಾಮದ ಕುಮಾರಿ ಶ್ರೀದೇವಿ ಕನ್ನಡ ಮಾಧ್ಯಮದಲ್ಲಿ 624 ಅಂಕಗಳನ್ನು ಗಳಿಸಿ ಸಾಧನೆ ಮಾಡಿದ್ದಾಳೆ.ಬೆಂಗಳೂರು ಗ್ರಾಮಾಂತರ ಜಿಲ್ಲೆಯು 89.63% ರಷ್ಟು ಸಕಾರಾತ್ಮಕ ಫಲಿತಾಂಶವನ್ನು ಗಳಿಸಿ ಹೆಮ್ಮೆಯ ಸಾಧನೆ ಮಾಡಿದೆ. 2009 ರಲ್ಲಿ 23ನೇ ಸ್ಥಾನದಲ್ಲಿದ್ದು ಈ ವರ್ಷ ಒಂದನೇ ಸ್ಥಾನಕ್ಕೆ ಏರಿದೆ.ಈ ಸಾಧನೆ ಹಿಂದೆ ಶಿಕ್ಷಣದ ಬಗ್ಗೆ ಅಪಾರ ಕಾಳಜಿಯನ್ನಿಟ್ಟುಕೊಂಡು ಮಾಡಿರುವ ಸಂಘಟಿತ ಪ್ರಯತ್ನವಿದೆ. ಈ ಯಶಸ್ಸು ಯಾವರೀತಿಯಲ್ಲಿ ಸಾಧ್ಯವಾಯಿತು ಎಂಬುವುದು ಅಧ್ಯಯನ ಯೋಗ್ಯವಾದದ್ದು. ಅಂತೆಯೆ ಗ್ರಾಮೀಣ ವಿದ್ಯಾರ್ಥಿಗಳ ಸಾಧನೆಯು ಮೆಚ್ಚುಗೆಗೆ ಅರ್ಹವಾಗಿದೆ.ಉತ್ತಮ ಫಲಿತಾಂಶವನ್ನು ಪಡೆದ ಎಲ್ಲಾ ವಿದ್ಯಾರ್ಥಿಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಜೊತೆಗೆ ಈ ಸಾಧನೆಗೆ ನೆರವಾದ ಪೋಷಕರು, ಅಧ್ಯಾಪಕರು, ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳು ಮತ್ತು ಕರ್ನಾಟಕ ಸರ್ಕಾರಕ್ಕೆ ನನ್ನ ಗೌರವಾದರಗಳು.

ಪರೀಕ್ಷೆ ಎಂಬುದು ಒಂದು ರೀತಿಯ ಆಟ. ಕೆಲವೊಮ್ಮೆ ಗೆಲ್ಲುತ್ತೇವೆ, ಕೆಲವೊಮ್ಮೆ ಸೋಲುತ್ತೇವೆ. ಪರೀಕ್ಷೆಯಲ್ಲಿ ನಪಾಸಾದ, ಕಡಿಮೆ ಅಂಕಗಳಿಸಿದ ಮಕ್ಕಳು ಕೂಡ ಖಂಡಿತವಾಗಿ ಜಾಣರೇ ಆಗಿರುತ್ತಾರೆ. ಯಾವುದೋ ಕಾರಣಕ್ಕಾಗಿ ಈ ವೈಫಲ್ಯ. ಅಂಥ ಮಕ್ಕಳಿಗೆ ವಿಶ್ವಾಸ ಮತ್ತು ಪ್ರೀತಿಯನ್ನು ತುಂಬುವುದು ಪೋಷಕರ ಮತ್ತು ಅಧ್ಯಾಪಕರ ಕರ್ತವ್ಯ. ಪರೀಕ್ಷೆಯಲ್ಲಿ ಪಾಸು-ನಪಾಸು ಸಹಜ. ಯಾವ ಮಕ್ಕಳೂ ಕೆಟ್ಟಯೋಚನೆ ಮಾಡಬೇಡಿ. ನೀವು ಬದುಕಿನ ಪರೀಕ್ಷೆಯಲ್ಲಿ ಖಂಡಿತ ಗೆಲ್ಲುತ್ತೀರಿ. ಪೂರಕ ಪರೀಕ್ಷೆಯನ್ನು ತೆಗೆದುಕೊಳ್ಳಿ. ಅತ್ಮವಿಶ್ವಾಸ ಬೆಳೆಸಿಕೊಳ್ಳಿ. ಬದುಕಿನ ಕವಲುಗಳು ಸಾವಿರಾರು, ಅಲ್ಲೆಲ್ಲಾ ಹೂವುಗಳು ಅರಳುತ್ತವೆ, ಕಾಯಿಕಚ್ಚಿ ಹಣ್ಣು ಮಾಗುತ್ತದೆ. ಧೃಢ ನಿರ್ಧಾರದಿಂದ ಸಕಾರಾತ್ಮಕ ಚಿಂತನೆಯಿಂದ ಗೆಲುವು ಸಾಧಿಸಬಹುದು.

"ಬರ" ದ ಬಿಸಿ ಸ್ವಲ್ಪ ಕಡಿಮೆಯಾದಂತೆ ತೋರುತ್ತಿದೆ. ಮುಂಗಾರುಪೂರ್ವ ಮಳೆಯು ನಿರೀಕ್ಷೆಯಂತೆ ಬಿರುಸಾಗಿದೆ. ಮುಂಗಾರು ಮಳೆ ಸ್ವಲ್ಪ ತಡವಾಗಿ ಆಗಮಿಸಿದರೂ ಚೆನ್ನಾಗಿ ಬರುತ್ತದೆ ಎಂಬ ಭರವಸೆಯನ್ನು ಹವಾಮಾನ ತಜ್ಞರು ನೀಡುತ್ತಿದ್ದಾರೆ. ಇದು ಒಳ್ಳೆಯ ಸುದ್ದಿ.

ರಾಜ್ಯ ಸರ್ಕಾರವು ಪ್ರತಿವರ್ಷ ನೀಡುವ "ಬಸವ ರಾಷ್ಟ್ರೀಯ ಪುರಸ್ಕಾರ" ವನ್ನು ನಮ್ಮ ಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷರಾದ ಡಾ. ಗೊ.ರು. ಚನ್ನಬಸಪ್ಪನವರಿಗೆ ನೀಡಲಾಗಿದೆ. ಮೈಸೂರಿನಲ್ಲಿ ಈ ತಿಂಗಳ 9 ರಂದು ಕರ್ನಾಟಕ ಸರ್ಕಾರದ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರು ಪ್ರಶಸ್ತಿ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ನಾನು ಮತ್ತು ನಮ್ಮ ಸಂಸ್ಥೆಯ ಹಿರಿಯ ಪದಾಧಿಕಾರಿಗಳು ಹಾಜರಿದ್ದೆವು. ಶ್ರೀ ಗೊ.ರು. ಚನ್ನಬಸಪ್ಪನವರ ಸಾಹಿತ್ಯ ಸಾಧನೆಗೆ ಬಸವ ಪ್ರಶಸ್ತಿಯ ಗೌರವವು ಸಂತೋಷದ ವಿಷಯ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ನಾನು ಹಿರಿಯರಾದ ಶ್ರೀ ಗೊ.ರು. ಚನ್ನಬಸಪ್ಪನವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

9ನೇ ತಾರೀಕಿನಂದು ಮೈಸೂರಿನಲ್ಲಿ ನಾನು ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರನ್ನು ಭೇಟಿ ಮಾಡಿದ್ದೆ. ಮುಂದಿನ ಡಿಸೆಂಬರ್– ಜನವರಿ ತಿಂಗಳಿನಲ್ಲಿ ಮೈಸೂರಿನಲ್ಲಿ ನಡೆಯಲಿರುವ 17ನೇ ರಾಷ್ಟ್ರೀಯ ಜಾಂಬೂರಿಯ ಬಗ್ಗೆ ವಿವರವಾಗಿ ಚರ್ಚಿಸಿದೆ. ಕರ್ನಾಟಕ ಘನಸರ್ಕಾರದ ಸಂಪೂರ್ಣ ಸಹಕಾರ ಸಹಾಯ ನಮಗೆ ದೊರೆಯುತ್ತದೆ.

ಈ ನಿಟ್ಟಿನಲ್ಲಿ ದಿನಾಂಕ 18–05–2016 ರಂದು ರಾಜ್ಯಕಾರ್ಯಾಲಯದಲ್ಲಿ, ನಮ್ಮ ಸಂಸ್ಥೆಯ ರಾಜ್ಯ ಪದಾಧಿಕಾರಿಗಳು, ಮೈಸೂರು ಜಿಲ್ಲಾ ಪದಾಧಿಕಾರಿಗಳು ಮತ್ತು ಸ್ವಯಂಸೇವಕರ ಸಭೆ ಜರುಗಿತು. ಜಾಂಬೂರಿಗಾಗಿ ಬಿಡುಗಡೆಯಾಗಲಿರುವ "ಪ್ರಥಮ ಸುದ್ದಿ ಪತ್ರ" ಮತ್ತು ಪೂರ್ವ ಸಿದ್ದತೆಗಳ ಬಗ್ಗೆ ಸುದೀರ್ಘವಾದ ಚರ್ಚೆ ನಡೆಯಿತು. ಹಲವು ಪ್ರಮುಖ ನಿರ್ಣಯಗಳನ್ನು ಕೈಗೊಳ್ಳಲಾಗಿದೆ. ಜಾಂಬೂರಿಯನ್ನು ಯಶಸ್ವಿಗೊಳಿಸುವ ದಿಕ್ಕಿನಲ್ಲಿ ಮುಂದಿನ ಕೆಲವು ತಿಂಗಳು ಸವಾಲಿನ ಹಾಗೂ ರಚನಾತ್ಮಕ ಕ್ರಿಯಾಪೂರ್ಣ ಚಟುವಟಿಕೆಯ ಆಗರವಾಗಿರುತ್ತದೆ. ಒಬ್ಬರಿಗೊಬ್ಬರು ಪ್ರೀತಿಯಿಂದ ಕೈ ಜೋಡಿಸೋಣ. ಜಾಂಬೂರಿ ಯಶಸ್ವಿಯಾಗುತ್ತದೆ ಮತ್ತು ಅದರ ಗರಿಮೆ ನಮ್ಮದಾಗುತ್ತದೆ ಎಂಬ ವಿಶ್ವಾಸ ನನ್ನದು.

ಕೊಂಡಜ್ಜಿಯಲ್ಲಿ " ರಾಷ್ಟ್ರ ಪ್ರಶಸ್ತಿ ಪುರಸ್ಕಾರ" ಪೂರ್ವಸಿದ್ದತಾ ಶಿಬಿರ ನಡೆಯಿತು. ಒಟ್ಟು 197 ಸ್ಕೌಟ್ಸ್ ಮತ್ತು 28 ಶಿಕ್ಷಕರು ಪಾಲ್ಗೊಂಡಿದ್ದರು. ದಿನಾಂಕ 21.04.2016 ರಂದು ನಾನು ಶಿಬಿರದಲ್ಲಿ ಭಾಗವಹಿಸಿದ್ದೆ. ರಾತ್ರಿಯ ಶಿಬಿರಾಗ್ನಿ, ಮಕ್ಕಳು ಮತ್ತು ಶಿಕ್ಷಕರ ಜೊತೆ ಸಮಾಲೋಚನೆಗಳು ಫಲಪ್ರದವಾಗಿತ್ತು. ಅಂತೆಯೆ ದೊಡ್ಡಬಳ್ಳಾಪುರದ ಶಿಬಿರಕ್ಕೆ ದಿನಾಂಕ 29.04.2016 ರಂದು ಭೇಟಿಕೊಟ್ಟಿದ್ದೆ. ಅಲ್ಲಿ 332 ಸ್ಕೌಟ್ಸ್ ಮತ್ತು 18 ಜನ ಸ್ಕೌಟ್ಸ್ ಮಾಸ್ಟರ್ಸ್ ಅವರುಗಳು ಭಾಗವಹಿಸಿದ್ದು ಗಮನಾರ್ಹವಾಗಿತ್ತು.

ರಾಜ್ಯಮಟ್ಟದ ತರಬೇತಿದಾರರ ಸಮಾವೇಶವು ಊಟಿಯಲ್ಲಿ ಮೇ 5 ರಿಂದ 7 ತಾರೀಕಿನವರೆಗೆ ನಡೆಯಿತು. ನಾನು ಮೇ 5 ಮತ್ತು 6 ರಂದು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೆ. ನಮ್ಮ ಸಂಸ್ಥೆಯ ತರಬೇತಿಗಳು ಉತ್ತಮವಾಗಿ ನಡೆಯಬೇಕಾದರೆ ನಾಯಕ ತರಬೇತಿದಾರರು (ಎಲ್.ಟಿ) ಮತ್ತು ಸಹಾಯಕ ನಾಯಕ ತರಬೇತಿದಾರರು (ಎ.ಎಲ್.ಟಿ) ಅವರುಗಳ ಪಾತ್ರ ಬಹಳ ಹಿರಿದು. ನಾನು ತರಬೇತಿದಾರರೊಂದಿಗೆ ಮುಕ್ತ ಸಂವಾದವನ್ನು ನಡೆಸಿ, ಅವರ ಕುಂದುಕೊರತೆಗಳನ್ನು ಆಲಿಸಿದ್ದೇನೆ. ಮುಂದಿನ ರಾಜ್ಯಸಮಿತಿಯ ಸಭೆಯಲ್ಲಿ ಈ ಎಲ್ಲಾ ವಿಷಯಗಳ ಬಗ್ಗೆ ಚರ್ಚಿಸಲಾಗುವುದು.

ಬೀದರ್ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉಪಾಧಕ್ಷರಾದ ಶ್ರೀ ಅಬ್ದುಲ್ ಖದೀರ್‌ವರು, ಬೀದರ್ ನಲ್ಲಿರುವ " ಶಾಹೀನ್ ಸಮೂಹ ಸಂಸ್ಥೆ" ಗಳ ಕಾರ್ಯದರ್ಶಿಯಾಗಿದ್ದಾರೆ. ಅವರು ಬೀದರ್‌ನ ಶಾಹೀನ್ ಕಾಲೇಜಿನಲ್ಲಿ ಪ್ರತಿಭಾವಂತರಾದ 5 ಸ್ಕೌಟ್ಸ್ ಮತ್ತು 5 ಗೈಡ್ಸ್‌ಗಳಿಗೆ ಉಚಿತವಾಗಿ ಸವಸತಿ ಶಿಕ್ಷಣ ನೀಡಲು ಮುಂದೆ ಬಂದಿದ್ದಾರೆ. ಉದಾರವಾದ ಈ ಕೊಡುಗೆಗಾಗಿ ಅವರನ್ನು ನಾನು ಹೃತ್ಪೂರ್ವವಾಗಿ ಅಭಿನಂದಿಸುತ್ತೇನೆ. ಈ ಬಗ್ಗೆ ಸುತ್ತೋಲೆಯನ್ನು ಎಲ್ಲಾ ಜಿಲ್ಲಾ ಕಾರ್ಯದರ್ಶಿಗಳಿಗೆ ಈಗಾಗಲೇ ಕಳುಹಿಸಲಾಗಿದೆ. ದಯವಿಟ್ಟು ಅರ್ಹರಾದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಈ ಸೌಲಭ್ಯವನ್ನು ಉಪಯೋಗಿಸಿಕೊಳ್ಳಬೇಕೆಂದು ಮನವಿ ಮಾಡುತ್ತೇನೆ.

ಜೂನ್ 5ನೇ ತಾರೀಕು, " ವಿಶ್ವಪರಿಸರ ದಿನ" ದ ಆಚರಣೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯು, ಕರ್ನಾಟಕ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಸಹಯೋಗದೊಂದಿಗೆ ಪರಿಸರ ದಿನವನ್ನು ಆಚರಿಸುತ್ತದೆ. ವಾಯು, ಜಲ ಮತ್ತು ಇತರೆ ಪರಿಸರ ಮಾಲಿನ್ಯವು ನಾವೂ ಸೇರಿದಂತೆ ಜೀವಜಗತ್ತಿಗೆ ಮಾರಕವಾಗಿದೆ. ನಮ್ಮ ಕೆರೆಗಳನ್ನು ನದಿಗಳನ್ನು ಮತ್ತು ಇತರ ಜಲಮೂಲಗಳನ್ನು ಸ್ವಚ್ಛವಾಗಿಟ್ಟುಕೊಳ್ಳುವ ಮತ್ತು ಅವುಗಳನ್ನು ಅಭಿವೃದ್ಧಿ ಪಡಿಸುವ ಜವಾಬ್ದಾರಿ ನಮ್ಮದು. ಅತಿಯಾದ ಪ್ರಾಕೃತಿಕ ಸಂಪತ್ತಿನ ಬಳಕೆ ಮುಂದಿನ ತಲೆಮಾರುಗಳಿಗೆ ತೊಂದರೆಯನ್ನುಂಟು ಮಾಡುತ್ತದೆ. ತುರ್ತಾಗಿ ಈ ಬಗ್ಗೆ ಆಳವಾಗಿ ಚಿಂತಿಸಿ ಯುಕ್ತ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಈ ವಿಷಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಜವಾಬ್ದಾರಿ ಹೆಚ್ಚಾಗಿದೆ. ಈ ಕಾರ್ಯಕ್ರಮವನ್ನು ಕರ್ನಾಟಕದ ಎಲ್ಲಾ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯಗಳಲ್ಲಿ ಆಚರಿಸಲು ಕೋರಿದೆ.

ಕಳೆದ ಒಂದೂವರೆ ವರ್ಷದಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ರಾಜ್ಯ ಕಾರ್ಯದರ್ಶಿಯಾಗಿ ಜವಾಬ್ದಾರಿಯನ್ನು ನಿರ್ವಹಿಸಿದ ಶ್ರೀ ಸಿದ್ದಯ್ಯ, ಭಾ.ಆ.ಸೇ(ನಿ.) ಅವರು ವೈಯಕ್ತಿಕ ಕಾರಣಗಳಿಗಾಗಿ ತಮ್ಮ ಹುದ್ದೆಗೆ ರಾಜೀನಾಮೆಯನ್ನು ನೀಡಿದ್ದಾರೆ. ಅವರು ನುರಿತ ಆಡಳಿತಗಾರರು. ಅವರ ಸೇವೆಯು ನಮ್ಮ ಸಂಸ್ಥೆಗೆ ದೊರೆತ್ತಿದ್ದು ಮಹತ್ವದ ವಿಚಾರ, ಅನಿವಾರ್ಯವಾಗಿ ಅವರ ರಾಜೀನಾಮೆಯನ್ನು ಅಂಗೀಕರಿಸಿದ್ದೇನೆ. ನಮ್ಮ ಸಂಸ್ಥೆಯ ಪರವಾಗಿ ನಾನು ಶ್ರೀ ಸಿದ್ದಯ್ಯನವರಿಗೆ ಬಹಳ ಆಭಾರಿಯಾಗಿದ್ದೇನೆ. ವೈಯಕ್ತಿಕವಾಗಿ ಮತ್ತು ಸಂಸ್ಥೆಯ ಪರವಾಗಿ ಅವರಿಗೆ ಶುಭಹಾರೈಕೆಗಳು.

ತಾತ್ಕಾಲಿಕವಾಗಿ ಈಗ ಜಂಟಿ ರಾಜ್ಯ ಕಾರ್ಯದರ್ಶಿಯಾಗಿರುವ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ರಾಜ್ಯ ಕಾರ್ಯದರ್ಶಿಗಳ ಜವಾಬ್ದಾರಿಯನ್ನು ನಿರ್ವಹಿಸುತ್ತಾರೆ. ಈ ಹಿಂದೆ ಕಾರ್ಯದರ್ಶಿಯ ಸ್ಥಾನವನ್ನು ಯಶಸ್ವಿಯಾಗಿ ನಿರ್ವಹಿಸಿರುವ ಶ್ರೀ ರೆಡ್ಡಿಯವರು ಈಗಿನ ತುರ್ತು ಸಂದರ್ಭದಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಂಡಿದ್ದಾರೆ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ, ಜಿಲ್ಲಾ, ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳು ಶ್ರೀ ಚಿನ್ನಸ್ವಾಮಿ ರೆಡ್ಡಿರವರಿಗೆ ಸಂಪೂರ್ಣ ಸಹಕಾರವನ್ನು ನೀಡಬೇಕೆಂದು ಕೋರುತ್ತೇನೆ.

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ವಾರ್ತೆಗಳು...........

## ಭಾವಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ರಾಷ್ಟ್ರಪತಿ ಗೈಡ್ಸ್‌ಗಳ ಪೂರ್ವಸಿದ್ಧತಾ ಶಿಬಿರಗಳು

ದಿನಾಂಕ : 20-04-2016 ರಿಂದ 24-04-2016 ರ ವರೆಗೆ ಕೊಂಡಜ್ಜಿ ಬಸಪ್ಪ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿಯಲ್ಲಿ, ಭಾವಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್‌ಗಳಿಗೆ ಪೂರ್ವಸಿದ್ಧತಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಶಿಬಿರದಲ್ಲಿ 197 ಸ್ಕೌಟ್ಸ್‌ಗಳು, 28 ಸ್ಕೌಟರ್‌ಗಳು 232 ಗೈಡ್ಸ್‌ಗಳು ಮತ್ತು 36 ಗೈಡರ್‌ಗಳು ಭಾಗವಹಿಸಿದ್ದರು. ಸ್ಕೌಟ್ ವಿಭಾಗಕ್ಕೆ ಶ್ರೀ ಕೆ.ಜಿ. ಗೋಪಾಲಕೃಷ್ಣ, ಎಲ್.ಟಿ., (ಎಸ್) ಮತ್ತು ಗೈಡ್ ವಿಭಾಗಕ್ಕೆ ಶ್ರೀಮತಿ ಮಲ್ಲೇಶ್ವರಿ ಜೆ. ಎಎಲ್‌ಟಿ(ಜಿ) ನಾಯಕತ್ವ ವಹಿಸಿದ್ದರು. ಶ್ರೀ ಷರಾಫ್ ಮಾದಪ್ಪ, ಎಲ್.ಟಿ. (ಎಸ್) ಮತ್ತು ಶ್ರೀ ಡಿ. ಬಸವರಾಜ್ ಎಲ್.ಟಿ.(ಎಸ್) ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದರು.

ದಿನಾಂಕ 21-04-2016 ರ ರಾತ್ರಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರು ಶಿಬಿರಕ್ಕೆ ಭೇಟಿನೀಡಿ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ದಾವಣಗೆರೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಹಾಜರಿದ್ದರು. ದಿನಾಂಕ 22-04-2016 ರಂದು ಶ್ರೀಮತಿ ಎಸ್.ಕೆ. ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿ(ಗೈ) ರವರು ಶಿಬಿರಕ್ಕೆ ಭೇಟಿನೀಡಿ "ಫ್ರೀ-ಬೀಯಿಂಗ್ ಮಿ" ಪದಕದ ಬಗ್ಗೆ ಮಾಹಿತಿ ನೀಡಿದರು. ದಿನಾಂಕ 24-04-2016 ರಂದು, ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಎಂ. ಪ್ರಭಾಕರ ಭಟ್ ಮತ್ತು ಶ್ರೀಮತಿ ಸಿ. ಮಂಜುಳಾ ರವರು ಶಿಬಿರದ ಮೇಲ್ವಿಚಾರಣೆ ವಹಿಸಿದ್ದರು.

* ದಿನಾಂಕ 26-04-2016 ರಿಂದ 30-04-2016 ರ ವರೆಗೆ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಶಿಬಿರ ಕೇಂದ್ರದಲ್ಲಿ ಭಾವಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪೂರ್ವಸಿದ್ಧತಾ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ 232 ಸ್ಕೌಟ್ಸ್‌ಗಳು, 18 ಸ್ಕೌಟ್ ಮಾಸ್ಟರ್ಸ್‌ಗಳು 257 ಗೈಡ್‌ಗಳು 38 ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಸ್ಕೌಟ್ ವಿಭಾಗದಲ್ಲಿ ಶ್ರೀ ಡಿ. ಬಸವರಾಜ್ ಎಲ್.ಟಿ.(ಎಸ್) ಮತ್ತು ಗೈಡ್ ವಿಭಾಗದಲ್ಲಿ ಶ್ರೀಮತಿ ಬಿ.ಡಿ. ಶಾಂತ, ಎಲ್‌ಟಿ(ಗೈ) ನಾಯಕತ್ವ ವಹಿಸಿದ್ದರು.

ದಿನಾಂಕ 28-04-2016 ರಂದು ಶ್ರೀ ರಘು ರವರು ಆಪತ್ತು ನಿರ್ವಹಣೆ ಬಗ್ಗೆ ಮಾಹಿತಿ ನೀಡಿದರು. ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ (ಗೈ) ರವರು "ಫ್ರೀ ಬೀಯಿಂಗ್ ಮೀ" ಪದಕದ ಬಗ್ಗೆ ಮಾಹಿತಿ ನೀಡಿದರು. ದಿನಾಂಕ 29-04-2016 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಮತ್ತು ಜಂಟಿ ರಾಜ್ಯ ಕಾರ್ಯದರ್ಶಿ (ಎಸ್) ಆದ ಶ್ರೀ ಚಿನ್ನಸ್ವಾಮಿ ರೆಡ್ಡಿ ರವರು ಶಿಬಿರಕ್ಕೆ ಭೇಟಿ ನೀಡಿ ಶುಭ ಹಾರೈಸಿದರು.

ದಿನಾಂಕ 30-04-2016 ರಂದು ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಎಂ. ಪ್ರಭಾಕರ್ ಭಟ್ ಮತ್ತು ಶ್ರೀಮತಿ ಸಿ. ಮಂಜುಳಾರವರು ಶಿಬಿರದ ಮೇಲ್ವಿಚಾರಕರಾಗಿದ್ದರು. ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಎಸ್) ಸ್ಥಾನಿಕ ಆಯುಕ್ತರು (ಕಾರ್ಯಕ್ರಮ ಮತ್ತು ತರಬೇತಿ) ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದರು.

## ರಾಜ್ಯಮಟ್ಟದ ತರಬೇತಿದಾರರ ಸಮಾವೇಶ

ದಿನಾಂಕ : 05-05-2016 ರಿಂದ 07-05-2016 ವರೆಗೆ ತಮಿಳುನಾಡಿನ ಊಟಿಯ ಜೆ.ಎಸ್.ಎಸ್. ಇಂಟರ್‌ನ್ಯಾಷನಲ್ ಸ್ಕೂಲ್, ತೀಟುಕಲೆನಲ್ಲಿ ರಾಜ್ಯಮಟ್ಟದ ತರಬೇತಿದಾರರ ಸಮಾವೇಶವನ್ನು ಏರ್ಪಡಿಸಲಾಗಿತ್ತು.

ರಾಜ್ಯಾದ್ಯಂತ ಈ ಸಮಾವೇಶದಲ್ಲಿ 47 ಸ್ಕೌಟ್ ಹಾಗೂ ಗೈಡ್ ವಿಭಾಗದಿಂದ 21, ಒಟ್ಟು 68 ತರ್ರಬೇತಿದಾರರು ಭಾಗವಹಿಸಿದ್ದರು. ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ಎಲ್.ಟಿ. ಲೋಕೇಶ್ ಮತ್ತು ಶ್ರೀಮತಿ ಕೆ.ವಿ. ಶ್ಯಾಮಲ ಇವರ ನಾಯಕತ್ವದಲ್ಲಿ ಶ್ರೀ ಚಿನ್ನಸ್ವಾಮಿ ರೆಡ್ಡಿ ಎಲ್.ಟಿ.(ಎಸ್), ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್ಸ್), ಶ್ರೀಮತಿ ಗೀತಾ ನಟರಾಜ್, ರಾಜ್ಯ ಅಯುಕ್ತರು(ಗೈಡ್ಸ್) ಶ್ರೀಮತಿ ಎನ್.ಕೆ. ಛಾಯಾ, ಎಲ್.ಟಿ.(ಗೈಡ್ಸ್) ಮತ್ತು ಶ್ರೀ ಎಂ.ಎಂ. ಲೋಂಡೆ, ಎಲ್.ಟಿ.(ಎಸ್) ಇವರ ಮಾರ್ಗದರ್ಶನದಲ್ಲಿ ತರಬೇತಿದಾರರ ಸಮಾವೇಶವು ನಡೆಯಿತು.

ದಿನಾಂಕ : 05-05-2016 ರಂದು ಬೆಳಗ್ಗೆ 11 ಗಂಟೆಗೆ ಶ್ರೀ ಮಹದೇವಪ್ಪ, ಆಡಳಿತಾಧಿಕಾರಿಗಳು ಜೆ.ಎಸ್.ಎಸ್. ಇಂಟರ್‌ನ್ಯಾಷನಲ್ ಸ್ಕೂಲ್ ಇವರು ಜ್ಯೋತಿ ಬೆಳಗಿಸುವುದರ ಮೂಲಕ ಸಮಾವೇಶ ಉದ್ಘಾಟಿಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಅಂತರರಾಷ್ಟ್ರೀಯ ಸಂಸ್ಥೆಯಾಗಿದ್ದು. ಇದರ ಉದಾತ್ತ ತತ್ವ ಮತ್ತು ನಿಯಮಗಳನ್ನು ಪಾಲಿಸಿದಲ್ಲಿ ಪ್ರತಿಯೊಬ್ಬರು ಉತ್ತಮ ನಾಗರೀಕರಾಗಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಸ್ಕೌಟ್ಸ್ ಸಂಸ್ಥೆಯು ಶ್ರಮಿಸುತ್ತಿದೆ ಎಂದು ತಿಳಿಸಿ, ಈ ಸಮಾವೇಶಕ್ಕೆ ಬೇಕಾದ ಎಲ್ಲ ಸೌಕರ್ಯಗಳನ್ನು ಮಾಡುವುದಾಗಿ ತಿಳಿಸಿ, ಶಿಬಿರ ಯಶಸ್ವಿಯಾಗಲೆಂದು ಹಾರೈಸಿದರು. ಸಮಾರಂಭದಲ್ಲಿ ಉಪಪ್ರಾಂಶುಪಾಲರಾದ ಶ್ರೀ ರವೀಶ್, ಶ್ರೀ ಶಿವಕುಮಾರ್, ವಾರ್ಡನ್ ಮತ್ತು ಜೆ.ಎಸ್.ಎಸ್. ಫಾರ್ಮಸಿ ಕಾಲೇಜು ಆಡಳಿತಾಧಿಕಾರಿಯಾದ ಶ್ರೀ ಬಸವಲಿಂಗದೇವರು ಉಪಸ್ಥಿತರಿದ್ದು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಿಂದ ಸಮಾಜಕ್ಕೆ ಆಗುವ ಒಳಿತನ್ನು ತಿಳಿಸಿ ಸಂಸ್ಥೆಯ ಬಗ್ಗೆ ಪ್ರಶಂಸೆಯನ್ನು ಮಾಡಿದರು.

ತರಬೇತಿದಾರರ ಸಮಾವೇಶದಲ್ಲಿ ಮುಖ್ಯವಾಗಿ 'ಮೂಲಭೂತ ತತ್ವಗಳು ಸಮಾವೇಶದ ಉದ್ದೇಶಗಳು ಎಪಿಆರ್‌ಒ/ಎಸ್‌ಒಟಿ ಗಳಲ್ಲಿ ಆದ ಬದಲಾವಣೆಗಳು, ಮೈಕ್ರೋ ಟೀಚಿಂಗ್, ಬಿ.ಪಿ. ಸಿಕ್ಸ್, ಡ್ಯೂಟಿ ಚೇಂಜ್, ಮಿಷನ್ ಮತ್ತು ವಿಷನ್, ಧ್ವಜಾರೋಹಣ ಕ್ರಮ, ಟ್ರೂಪ್ ಮೀಟಿಂಗ್, ಹ್ಯಾಂಡ್ ಸಿಗ್ನಲ್ಸ್, ಪ್ರಕೃತಿ ವಿಕೋಪ ನಿರ್ವಹಣೆ, ಜಿಲ್ಲಾ ಸಂಸ್ಥೆಗಳ ಕಾರ್ಯಕ್ರಮ ಮತ್ತು ತರಬೇತಿಗಳನ್ನು ನಡೆಸುವಲ್ಲಿ ಟ್ರೈನರ್ಸ್‌ಗಳ ಪಾತ್ರ ಮತ್ತು 2016-17 ನೇ ಸಾಲಿನ ರಾಜ್ಯಸಂಸ್ಥೆ ಕಾರ್ಯಕ್ರಮ ಮತ್ತು ತರಬೇತಿಗಳ ಕುರಿತು ಮಾಹಿತಿ ನೀಡಲಾಯಿತು.

ತರಬೇತಿದಾರರ ಸಮಾವೇಶದಲ್ಲಿ ದಿನಾಂಕ 05-05-2016 ಮತ್ತು 06-05-2016 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಭೇಟಿ ನೀಡಿ, ಶಿಭಿರಾರ್ಥಿಗಳೊಂದಿಗೆ ಮುಕ್ತ ಸಂವಾದ ನಡೆಸಿ ತರಬೇತಿದಾರರ ಕೊರತೆಗಳನ್ನು ಆಲಿಸಿ ಮಾತನಾಡುತ್ತ, ನಮ್ಮ ಸಂಸ್ಥೆಯ ಚಟುವಟಿಕೆ ಮತ್ತು ತರಬೇತಿಗಳು ಉತ್ತಮವಾಗಿ ನಡೆಯಬೇಕಾದರೆ ನಿಮ್ಮ ಪಾತ್ರ ಅತೀ ಮುಖ್ಯವಾಗಿದ್ದು ಜಿಲ್ಲೆಗಳಲ್ಲಿ ತರಬೇತಿ ಶಿಬಿರ ನಡೆಸುವಾಗ ಕಂಡುಬರುವ ನ್ಯೂನತೆಗಳು ಮತ್ತು

ಸಮಸ್ಯೆಗಳ ಕುರಿತು ರಾಜ್ಯ ಸಂಸ್ಥೆಯ ಸಭೆಯಲ್ಲಿ ಮಂಡಿಸಿ/ಚರ್ಚಿಸಿ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸುವುದಾಗಿ ತಿಳಿಸಿದರು. ಶ್ರೀ ನಾಗೇಶ ಗೌಡರವರು ಬರೆದ "ಮನುಕುಲದ ರಕ್ಷಣೆಗೆ ಮಹತ್ವದ ದಿನಗಳು" ಪುಸ್ತಕದ ಕುರಿತು ಮಾತನಾಡಿ ಈ ಪುಸ್ತಕವನ್ನು ಎಲ್ಲರೂ ಕೂಡ ಓದಿ ವಿಷಯಗಳನ್ನು ತಿಳಿದುಕೊಂಡು ಪರಿಸರ ರಕ್ಷಣೆಗೆ ಪ್ರಯತ್ನಿಸಬೇಕೆಂದು ತಿಳಿಸಿದರು ಮತ್ತು ಮೈಸೂರಿನಲ್ಲಿ ನಡೆಸುವ ರಾಷ್ಟ್ರೀಯ ಜಾಂಬೂರಿ ಬಗ್ಗೆ ಮಾಹಿತಿ ನೀಡಿದರು.

ದಿನಾಂಕ 07-05-2016 ರಂದು ಬೆಳಗ್ಗೆ 7.30ಕ್ಕೆ ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ಶ್ರೀ ಎಂ.ಎಂ. ಲೋಂಡೆ ಯವರ ನೇತೃತ್ವದಲ್ಲಿ ಜೆ.ಎಸ್.ಎಸ್. ಸ್ಕೂಲ್ ಸಭಾಂಗಣದಲ್ಲಿ ಏರ್ಪಡಿಸಲಾಯಿತು.

## ರಾಜ್ಯ ಪುರಸ್ಕಾರ ಸ್ಕೌಟ್ಸ್ ಪರೀಕ್ಷಾ ಶಿಬಿರ

ದಿನಾಂಕ : 10-05-2016 ರಿಂದ 14-05-2016 ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆ ವತಿಯಿಂದ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಸಹಕಾರದಲ್ಲಿ ಪಿಲಿಕುಳದ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ರಾಜ್ಯ ಪುರಸ್ಕಾರ್ ಪರೀಕ್ಷಾ ಶಿಬಿರದ ಸಮಾರಂಭವು ನಡೆಯಿತು.

ಶಿಬಿರದ ಉದ್ಘಾಟನೆಗೈದು ಮಾತನಾಡಿದ ವಿಧಾನಸಭಾ ಪರಿಷತ್ ಶಾಸಕರಾಗಿರುವ ಶ್ರೀ ಐವನ್ ಡಿ'ಸೋಜರವರು ವಿದ್ಯಾರ್ಥಿ ದೆಸೆಯಲ್ಲಿ ಶಿಸ್ತು ಬಹಳ ಮುಖ್ಯ ಮತ್ತು ಭವಿಷ್ಯವನ್ನು ರೂಪಿಸಲು ನಾಯಕತ್ವ, ಸಹಬಾಳ್ವೆ, ಸಹನೆ, ಸಂಯಮ ಇಂತಹ ಗುಣಗಳು ಪ್ರಸಕ್ತ ವಿದ್ಯಾಮಾನದಲ್ಲಿ ಅಗತ್ಯವಾಗಿದ್ದು ಇದಕ್ಕೆ ಪೂರಕವೆಂಬಂತೆ ಸ್ಕೌಟ್ಸ್-ಗೈಡ್ಸ್ ಚಳುವಳಿಯು ಕಾರ್ಯನಿರ್ವಹಿಸುತ್ತಿದೆ. ಈ ಸಂಸ್ಥೆಯಲ್ಲಿ ತೊಡಗಿಸಿಕೊಂಡ ತಾವುಗಳು ಭಾಗ್ಯವಂತರು ಎಂದರು.

ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿಯವರು ಅಧ್ಯಕ್ಷತೆಯನ್ನು ವಹಿಸಿ ಶುಭವನ್ನು ಕೋರಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರು ನೂತನವಾಗಿ, ಸುಮಾರು 2 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲ್ಪಡುವ ಸುಸಜ್ಜಿತ ಸಭಾಂಗಣಕ್ಕೆ ಸಹಕಾರವನ್ನು ಕೋರಿ ಶಾಸಕರಿಗೆ ಮನವಿಯನ್ನು ಸಲ್ಲಿಸಿದರು. ಮುಖ್ಯ ಅತಿಥಿಗಳಾಗಿ ಗೈಡ್ಸ್ ಜಿಲ್ಲಾ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹಾ, ಜಿಲ್ಲಾ ಕೋಶಾಧಿಕಾರಿಗಳಾದ ಶ್ರೀ ವಾಸುದೇವ ಬೋಳೂರು, ಶಿಬಿರದ ನಾಯಕರಾದ ಶ್ರೀ ರಾಮಚಂದ್ರ, ರಾಜ್ಯ ಕಾರ್ಯಕಾರಿಣಿ ಸಮಿತಿ ಸದಸ್ಯರಾದ ಶ್ರೀ ಶರಾಫ್ ಮಾದಪ್ಪ, ಹಿರಿಯ ಸ್ಕೌಟರ್ ಶ್ರೀ ಗೋಪಾಲಕೃಷ್ಣ, ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಸಂತೋಷ್ ಕುಮಾರ್ ಕದ್ರಿ ಉಪಸ್ಥಿತರಿದ್ದರು. ಪರೀಕ್ಷಾ ಶಿಬಿರದಲ್ಲಿ ವಿವಿಧ ಜಿಲ್ಲೆಗಳಿಂದ 210 ಸ್ಕೌಟ್‌ಗಳು 45 ಶಿಕ್ಷಕ ವೃಂದದವರು ಭಾಗವಹಿಸಿದ್ದರು.

ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್ ಸ್ವಾಗತಿಸಿದರು. ಜಿಲ್ಲಾ ಸಂಘಟಕ ಶ್ರೀ ಕೆ. ಭರತ್‌ರಾಜ್ ಧನ್ಯವಾದ ಸಲ್ಲಿಸಿದರು. ಜಿಲ್ಲಾ ತರಬೇತಿ ಕೌನ್ಸಿಲ್‌ರಾಗಿರುವ ಶ್ರೀ ತ್ಯಾಗಂ ಹರೇಕಳ ನಿರೂಪಿಸಿದರು.

| ಮುಂಬರುವ ರಾಜ್ಯಮಟ್ಟದ ಶಿಬಿರಗಳು | | | |
|---|---|---|---|
| ಕ್ರ.ಸ. | ಶಿಬಿರದ ಹೆಸರು | ದಿನಾಂಕ | ಸ್ಥಳ |
| 1. | ಸ್ಕೌಟ್ಸ್–ಗೈಡ್ಸ್‌ಗಳಿಗೆ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರ | 24 ರಿಂದ 28 ಮೇ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| 2. | ಸ್ಕೌಟ್ಸ್–ಗೈಡ್ಸ್‌ಗಳಿಗೆ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರ | 7 ರಿಂದ 11 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 3. | ಸ್ಕೌಟ್ಸ್‌ಗಳಿಗೆ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರ | 14 ರಿಂದ 18 ಜೂನ್ 2016 | ಸಸ್ಯಚೇತನ ತರಬೇತಿ ಕೇಂದ್ರ, ಧಾರವಾಡ |
| 4. | ಕಬ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ | 14 ರಿಂದ 20 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 5. | ಸ್ಕೌಟ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ | 14 ರಿಂದ 20 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 6. | ರೋವರ್ ಸ್ಕೌಟ್ ಲೀಡರ್ಸ್‌ಗಳ ಮೂಲ ತರಬೇತಿ ಶಿಬಿರ | 14 ರಿಂದ 20 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 7. | ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರ | 21 ರಿಂದ 25 ಜೂನ್ 2016 | ಶಕ್ತಿನಗರ, ರಾಯಚೂರು |
| 8. | ರೋವರ್ ಸ್ಕೌಟ್ ಲೀಡರ್ಸ್‌ಗಳ ಮೂಲ ತರಬೇತಿ ಶಿಬಿರ | 24 ರಿಂದ 30 ಜೂನ್ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| 9. | ಸ್ಕೌಟ್ಸ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ | 24 ರಿಂದ 30 ಜೂನ್ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| 10. | ಗೈಡ್ ಕ್ಯಾಪ್ಟನ್‌ಗಳಿಗೆ ಮುಂದುವರೆದ ತರಬೇತಿ ಶಿಬಿರ | 22 ರಿಂದ 28 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 11. | ಫ್ಲಾಕ್ ಲೀಡರ್ಸ್‌ಗಳಿಗೆ ಮುಂದುವರೆದ ತರಬೇತಿ ಶಿಬಿರ | 22 ರಿಂದ 28 ಜೂನ್ 2016 | ಕೊಂಡಜ್ಜಿ ಬಸಪ್ಪ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ |
| 12. | ಸ್ಕೌಟ್ಸ್‌ಗಳಿಗೆ ರಾಜ್ಯಪುರಸ್ಕಾರ ಪರೀಕ್ಷಾ ಶಿಬಿರ | 28 ಜೂನ್ 2 ಜುಲೈ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| 13. | ರೋವರ್ಸ್–ರೇಂಜರ್ಸ್‌ಗಳಿಗೆ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರ | 28 ಜೂನ್ 2 ಜುಲೈ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| 14. | ಎಎಸ್‌ಒಸಿ/ಡಿಒಸಿ/ಡಿಒಗಳ ಸಭೆ | 1 ಮತ್ತು 2 ಜುಲೈ 2016 | ಡಾ॥ ಅನಿಬೆಸೆಂಟ್ ಸ್ಕೌಟ್ಸ್–ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ |
| ಪ್ರಾದೇಶಿಕ ಮಟ್ಟದ ಶಿಬಿರಗಳು | | | |
| 1. | ಯೋಗ ತರಬೇತಿ ಶಿಬಿರ | 20 ರಿಂದ 22 ಜೂನ್2016 | ಶಾಂತಿಗೃಹ, ಬೆಂಗಳೂರು |
| 2. | ಹ್ಯಾಂಡಿಕ್ರ್ಯಾಫ್ಟ್–ವೊಕೇಷನಲ್ ಶಿಬಿರ | 26 ರಿಂದ 30 ಜೂನ್2016 | ರಾಜ್ಯ ತರಬೇತಿ ಕೇಂದ್ರ, ಜೇಡಿಮೆಟ್ಲ, ಸಿಕಿಂದ್ರಾಬಾದ್ ತೆಲಂಗಾಣ ರಾಜ್ಯ |

ಭಾಗವಹಿಸಲಿರುವ ಅರ್ಹ ಹಾಗೂ ಆಸಕ್ತಿ ಸ್ಕೌಟ್–ಗೈಡ್‌ಗಳು, ಸ್ಕೌಟರ್–ಗೈಡರ್‌ಗಳು, ಹೆಚ್ಚಿನ ಮಾಹಿತಿಗಾಗಿ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀ ಎಂ. ಪ್ರಭಾಕರ್ ಭಟ್ (9448914540), ರಾಜ್ಯ ಸಂಘಟನಾ ಆಯುಕ್ತರು (ಗೈ) ಶ್ರೀಮತಿ ಸಿ. ಮಂಜುಳಾ (9844366941), ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌ) (9449886981) ಮತ್ತು ಶ್ರೀಮತಿ ಕೆ.ವಿ. ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು (ಗೈ) 9980237570 ಇವರುಗಳನ್ನು ಸಂಪರ್ಕಿಸುವುದು.

## ನೀರು ಜೀವಜಲ ಹೌದಾದರೂ ಅದು ಅಶುದ್ಧವಾಗಿದ್ದರೆ ನಮ್ಮ ಬದುಕಿಗೆ ನಂ. 1 ಖಳನಾಯಕ

# ಸ್ಟಾಕ್‌ಹೋಮ್‌ಗೆ ಬೇಕಂತೆ ನೀರಿನ ಹೊಸ ಐಡಿಯಾ

'ಅಜ್ಜ-ಅಜ್ಜೀನ್ನ ನೋಡೋಕೆ ಅಂತ ಇಂಡಿಯಾಕ್ಕೆ ಹೋಗಿದ್ದೆ. ಅಲ್ಲಿನ ನೀರಿನ ಸಮಸ್ಯೆ ನೋಡಿ ತುಂಬಾ ಬೇಜಾರಾಯ್ತು. ನೀರಿನ ಶುದ್ಧೀಕರಣದ ಬಗ್ಗೆ ಏನಾದರೂ ಹೊಸ ಸಂಶೋಧನೆ ಮಾಡಬೇಕು ಅಂತ ಆಗಲೇ ನಿರ್ಧಾರ ಮಾಡಿದೆ....'

– ಕಳೆದ ವರ್ಷ, 2015ರ 'ಸ್ಟಾಕ್‌ಹೋಮ್ ಜೂನಿಯರ್ ವಾಟರ್ ಪ್ರೈಝ್' ಎಂಬ ಪ್ರತಿಷ್ಠಿತ ಪ್ರಶಸ್ತಿಯನ್ನು ಪಡೆದ ಅಮೆರಿಕದ ಹದಿಹುಡುಗ ಪೆರಿ ಅಳಗಪ್ಪನ್ ಹೇಳಿದ ಮಾತು ಇದು.

ಕುತೂಹಲದ ಸಂಗತಿ ಏನೆಂದರೆ, ಇದೇ ಅರ್ಥದ ಮಾತನ್ನು ಒಂದು ವರ್ಷ ಮುಂಚೆ, 2014 ರಲ್ಲಿ ದೀಪಿಕಾ ಕುರುಪ್ ಎಂಬ ಅಮೆರಿಕದ ಹದಿಹುಡುಗಿಯು ಹೇಳಿದ್ದಳು. ಅವಳಿಗೂ ಚೆನ್ನೈಯಲ್ಲಿ ಅಜ್ಜನ ಮನೆಯ ಆಸುಪಾಸಿನ ಕೊಳಕು ನೀರಿನ ಪರಿಸರವೇ ಹೊಸ ಸಂಶೋಧನೆಗೆ ಪ್ರೇರಣೆ ನೀಡಿತು. ನೀರಿನ ಶುದ್ಧೀಕರಣಕ್ಕೆ ಅವಳು ರೂಪಿಸಿದ ಸಾಧನಕ್ಕೆ ಆ ವರ್ಷ ಅಮೆರಿಕದ 'ಸ್ಟಾಕ್‌ಹೋಮ್ ಜೂನಿಯರ್ ವಾಟರ್ ಪ್ರೈಝ್' ಲಭಿಸಿತ್ತು. ಅಂದಹಾಗೆ, ದೊಡ್ಡವರಿಗೆ ನೀಡುವ ಸ್ಟಾಕ್‌ಹೋಮ್ ವಾಟರ್ ಪ್ರೈಝ್ (ಅದಕ್ಕೆ 'ನೀರಿನ ನೊಬೆಲ್' ಎಂತಲೇ ಕರೆಯುತ್ತಾರೆ) ಕೂಡ ಭಾರತದ ರಾಜೇಂದ್ರ ಸಿಂಗ್ ಅವರಿಗೆ ಕಳೆದ ವರ್ಷ ಲಭಿಸಿದೆ. ರಾಜೇಂದ್ರ ಅವರೇನೂ ಅಜ್ಜ-ಅಜ್ಜಿಯ ಮನೆಗೆ ಹೋಗಿರಲಿಲ್ಲ. ಆದರೆ ನೀರು ಅವರನ್ನು ಹೇಗೆ ತನ್ನತ್ತ ಸೆಳೆದುಕೊಂಡಿತು ಎಂಬುದು ಕುತೂಹಲಕಾರಿ ಕತೆಯೇ ಆಗಿದೆ. ಈ ವಾರ ಈ ಮೂವರ ಸುತ್ತ ತುಸು ಗಿರಕಿ ಹೊಡೆಯೋಣ.

ನೀರನ್ನು ನಾವು ಜೀವಜಲ ಎನ್ನುತ್ತೇವಾದರೂ, ಅದು ಅಶುದ್ಧವಾಗಿದ್ದರೆ ನಮ್ಮ ಬದುಕಿಗೆ ನಂಬರ್ 1 ಖಳನಾಯಕ ಆಗುತ್ತದೆ. ನೀರಿನಿಂದ ಹಬ್ಬುವ ರೋಗರುಜಿನಗಳೇ ಹಿಂದೆಲ್ಲ ಜಗತ್ತಿನ ಜನಸಂಖ್ಯೆಯನ್ನು ನಿಯಂತ್ರಣದಲ್ಲಿ ಇಟ್ಟಿರುತ್ತಿದ್ದವು. ಕಳೆದ ನೂರು ವರ್ಷಗಳಲ್ಲಿ ವೈದ್ಯಕೀಯ ಕ್ರಾಂತಿಯಿಂದಾಗಿಯೇ ಮನುಷ್ಯನ ಜೀವಿತಾವಧಿ ಹೆಚ್ಚಿತೆಂದು ಹೇಳುತ್ತಾರಾದರೂ ಅಸಲೀ ವಿಷಯ ಏನೆಂದರೆ ನಲ್ಲಿಯ ಮೂಲಕ ಶುದ್ಧ ನೀರಿನ ಪೂರೈಕೆ ವ್ಯವಸ್ಥೆ ಜಾರಿಗೆ ಬಂದಿದ್ದೇ ಕೋಟ್ಯಾಂತರ ಮಕ್ಕಳ ಜೀವ ಉಳಿಸಿದೆ. ಅವರೆಲ್ಲ ದೊಡ್ಡವರಾಗಿ ವಂಶೋದ್ಧಾರಕರಾಗಲು ನೀರೇ ನೆರವಿಗೆ ಬಂದಿದೆ. ಅದರೆ ಈಗಲೂ ಹಿಂದುಳಿದ ಪ್ರಜೆಗಳಿಗೆ ಶುದ್ಧ ನೀರು ಸಿಗುತ್ತಿಲ್ಲ. ಕೊಳಕು ನಿರನ್ನು ಶುದ್ಧ ಮಾಡಬೇಕೆಂದರೆ ಕೋಟಿಗಟ್ಟಲೆ ಬಂಡವಾಳ ಬೇಕು; ವಿದ್ಯುತ್ ವ್ಯವಸ್ಥೆ ಬೇಕು. ಆಡಳಿತ ಯಂತ್ರವು ಸುವ್ಯವಸ್ಥಿತ ಇರಬೇಕು. ಎಲ್ಲಕ್ಕಿಂತ ಮುಖ್ಯ ಏನೆಂದರೆ ಶುದ್ಧ ಮಾಡಲೆಂದು ಒಂದಷ್ಟು ನೀರು ಇರಬೇಕು.

ಅಮೆರಿಕದಲ್ಲಿ ಜನಿಸಿದ ಮಲೆಯಾಳಿ ಹುಡುಗಿ ದೀಪಿಕಾ ಕುರುಪ್ 2012 ರಲ್ಲಿ ರಜೆ ಕಳೆಯಲು ಬಂದಾಗ ಇಲ್ಲಿನ ಕೊಳೆಗೇರಿಗಳ ನೀರಿನ ಅಧ್ವಾನವನ್ನು ನೋಡಿ ಹೌಹಾರಿದ್ದಳು. ಮರಳಿ ನ್ಯೂಹ್ಯಾಂಪ್‌ಶೈರ್‌ಗೆ ಹೋಗಿ ತನ್ನ ಹೈಸ್ಕೂಲ್‌ನ ಸಂಶೋಧನಾ ಪ್ರಾಜೆಕ್ಟ್‌ಗೆ ನೀರಿನ ಶುದ್ಧೀಕರಣವನ್ನೇ ಆಯ್ದುಕೊಂಡಳು. ಬಿಸಿಲಿನ ಶಕ್ತಿಯಿಂದಲೇ ನೀರಲ್ಲಿರವು ಸೂಕ್ಷ್ಮ ಏಕಾಣು ಜೀವಿಗಳನ್ನೂ ಕೊಳಕು ದ್ರವ್ಯಗಳನ್ನೂ ಧ್ವಂಸ ಮಾಡಬಲ್ಲ ಫಿಲ್ಟರನ್ನು ರೂಪಿಸಿದಳು. ಬಹುರಾಷ್ಟ್ರೀಯ ಕಂಪನಿಗಳ ವಿಶ್ವಮಾನ್ಯ ಫಿಲ್ಟರ್‌ಗಳಿಗಿಂತ ಇದು ಹೆಚ್ಚಿನ ದಕ್ಷತೆಯ ಹಾಗೂ ಅಗ್ಗದ ಸಾಧನ; ಅಷ್ಟೇ ಅಲ್ಲ, ಯಾವುದೇ ಬಗೆಯ ಕೆಮಿಕಲ್ ವಸ್ತುಗಳನ್ನು ನೀರಿಗೆ ಸೇರಿಸಬೇಕಾದ ಅಗತ್ಯ ಇಲ್ಲ. ಅಮೆರಿಕದಲ್ಲಿ ಪಿಯುಸಿ ಸ್ತರದ ವಿದ್ಯಾರ್ಥಿಗಳಿಗಾಗಿ ನಡೆಸುವ ರಾಷ್ಟ್ರಮಟ್ಟದ 'ಯಂಗ್ ಸೈಂಟಿಸ್ಟ್' ಸ್ಪರ್ಧೆಯ 25 ಸಾವಿರ ಡಾಲರ್‌ಗಳ ಮೊದಲ ಸ್ಥಾನವನ್ನು ದೀಪಿಕಾ ಪಡೆದಳು. ಸ್ಟಾಕ್‌ಹೋಮ್ ಮೀಸಲಿರುವ 10 ಸಾವಿರ ಡಾಲರ್ ಬಹುಮಾನ ಪಡೆದಳು. ನಂತರದ ಎರಡು ವರ್ಷಗಳಲ್ಲಿ ಇದೇ ಫಿಲ್ಟರನ್ನು ಇನ್ನಷ್ಟು ಸುಧಾರಿಸಿ ಶ್ವೇತಭವನದ ಸನ್ಮಾನ, ನ್ಯಾಷನಲ್ ಜಿಯಾಗ್ರಫಿಕ್‌ನ 'ಗೂಗಲ್ ಸೈನ್ಸ್ ಫೇರ್' ಪ್ರಶಸ್ತಿ ಪಡೆದದ್ದೂ ಅಲ್ಲದೆ, ಫೋರ್ಬ್ಸ್‌ನ '30 ರೊಳಗಿನ 30' ಅಗ್ರಮಾನ್ಯ ಸಂಶೋಧಕರ ಪಟ್ಟಿಯಲ್ಲೂ ಸೇರ್ಪಡೆಯಾದಳು.

ಪೆರ್ರಿ ಅಳಗಪ್ಪನ್ ಕತೆ ಇದಕ್ಕಿಂತ ತುಸು ಭಿನ್ನವಾದುದು. ಅಮೆರಿಕದ ಟೆಕ್ಸಾಸ್‌ನಲ್ಲಿ ಓದುತ್ತಿರುವ ಈ ಹುಡುಗ ಕೂಡ ಅಜ್ಜನ ಮನೆಗೆ ಬಂದಾಗ ನಗರದಂಚಿನ ಕೊಳಕು ಪರಿಸರವನ್ನು ನೋಡಿದ್ದ. ಕೊಳಗೇರಿಗಳಲ್ಲಿ ನೀರಿನ ಗುಣಮಟ್ಟದ ಅವನನ್ನು ಕಂಗೆಡಿಸಿತ್ತು. ಅಲ್ಲೆಲ್ಲ ಗುಜರಿ ವಸ್ತುಗಳಿಂದ ಇಲೆಕ್ಟ್ರಾನಿಕ್ ಬಿಡಿಭಾಗಗಳನ್ನು ಬೇರ್ಪಡಿಸುವ ಕೆಲಸ ನಡೆಯುತ್ತಿತ್ತು. ನಮ್ಮದಷ್ಟೇ ಅಲ್ಲ, ಜಗತ್ತಿನ ನಾನಾ ದೇಶಗಳಲ್ಲಿ ಕೆಟ್ಟುಹೋದ ಟಿ.ವಿ. ಕಂಪ್ಯೂಟರ್, ಮೊಬೈಲ್‌ಗಳೆಲ್ಲ ನಜ್ಜನಜ್ಜಾಗಿ ಹಡಗು ಏರಿ ಚೀನಾಕ್ಕೆ ಇಲ್ಲವೆ ಭಾರತಕ್ಕೆ ಬರುತ್ತವೆ. ಇಲ್ಲಿನ ಚಿಂದಿ ಕಾರ್ಮಿಕರು ಅವುಗಳನ್ನು ಬೇರ್ಪಡಿಸುವಾಗ ವಿಷಕಾರಿ ಲೋಹದ ಸಂಯುಕ್ತಗಳು ಆಸಿಡ್ ವಾಶ್‌ನಲ್ಲಿ ಬೇರ್ಪಟ್ಟು, ಕೊಳಕು ಚರಂಡಿಗಳ ಮೂಲಕ ಕೆರೆಗೋ ಹಳ್ಳಕ್ಕೋ ಸೇರುತ್ತವೆ. ಕ್ರಮೇಣ ಜಲಚರಗಳಿಗೆ, ಪ್ರಾಣಿಪಕ್ಷಿಗಳಿಗೆ, ಕೊನೆಗೆ ಮೇವಿನ ಮೂಲಕ ಜಾನುವಾರುಗಳ ಹೊಟ್ಟೆಗೆ ಸೇರುತ್ತವೆ ಮತ್ತು ಕೊಳವೆ ಬಾವಿಗಳ ಮೂಲಕ ಅಥವಾ ನೇರವಾಗಿ ಮನುಷ್ಯರ ಶರೀರದಲ್ಲೂ ಸಂಗ್ರಹವಾಗುತ್ತವೆ. ಕುಡಿಯುವ ನೀರು ಅದೆಷ್ಟೋ ಬಾರಿ ಸ್ಫಟಿಕ ಶುದ್ಧವಾಗಿ ಕಂಡರೂ ಅದರಲ್ಲಿ ಏಕಾಣು ಜೀವಿಗಳ ಲವಲೇಶವೂ ಇಲ್ಲದಿದ್ದರೂ ಆ ನೀರು ವಿಷಮಯ ಆಗಿರಬಹುದು. ಅದರಲ್ಲಿ ಕಣ್ಣಿಗೆ ಕಾಣದ ಭಾರಲೋಹಗಳ ಸಂಯುಕ್ತಗಳು ಲೀನವಾಗಿರಬಹುದು.

ಅಂಥ ನೀರಲ್ಲಿ ಸೇರ್ಪಡೆಯಾಗಿರುವ ಕ್ರೋಮಿಯಂ, ಕ್ಯಾಡ್ಮಿಯಂ, ವೆನಾಡಿಯಂ, ಪಾದರಸ ಮುಂತಾದ ವಿಷಕಾರಿ ಭಾರಲೋಹಗಳನ್ನು ಹೀರಿ ತೆಗೆಯುವುದು ಹೇಗೆಂಬ ಬಗ್ಗೆ 17 ವರ್ಷದ ಪೆರ್ರಿ ಅಮೆರಿಕದ ಟೆಕ್ಸಾಸ್‌ನಲ್ಲಿ ಅಧ್ಯಯನ ನಡೆಸಿದ. ಬಳಕೆಯಲ್ಲಿದ್ದ ಎಲ್ಲ ವಿಧಾನಗಳೂ ತೀರ ದುಬಾರಿ, ತೀರ ಕ್ಲಿಷ್ಟವಾಗಿದ್ದವು. ವಿಶ್ವಾಸಾರ್ಹತೆ ಇರಲೇ ಇಲ್ಲ. ಅಮೆರಿಕಕ್ಕೆ ಮರಳಿದ ಮೇಲೆ, ಈ ಯುವಕ ಗ್ರಾಫೀನ್ ನ್ಯಾನೊ ಕೊಳವೆಗಳ ಒಂದು ಸೋಸು ಪರದೆಯನ್ನು ತಯಾರಿಸಿದ. ಅದರ ಮೂಲಕ ಇಂಥ ಕೊಳವೆ ನೀರನ್ನು ಹಾಯಿಸಿ ನೋಡಿದ. ಕೆಲವು ವಿಫಲ ಪ್ರಯತ್ನಗಳ ನಂತರ

ನೂರಕ್ಕೆ ನೂರರಷ್ಟು ಚೊಕ್ಕಟವಾಗಿ ನೀರನ್ನು ಸೋಸಬಲ್ಲ ಅಲ್ಪವೆಚ್ಚದ ಸೋಸು ಪರದೆ ಸಿದ್ಧವಾಯಿತು. ಅಮೆರಿಕದ ಇತರೆಲ್ಲ ಯುವ ಸಂಶೋಧಕರಿಗಿಂತ ಈತನ ಸಾಧನೆಗೆ ಪ್ರಶಸ್ತಿ ಲಭಿಸಿತು. ರಾಷ್ಟ್ರಮಟ್ಟದಲ್ಲಷ್ಟೇ ಅಲ್ಲ, ಜಾಗತಿಕ ಮಟ್ಟದಲ್ಲು 15 ಸಾವಿರ ಡಾಲರ್‌ಗಳ 'ಸ್ಟಾಕ್‌ಹೋಮ್ ಜೂನಿಯರ್' ಜಲ ಪ್ರಶಸ್ತಿ ಪೆರ್ರಿಯ ಮುಡಿಗೇರಿತು. ಬಯಸಿದ್ದರೆ ಆತ ತನ್ನ ಸಾಧನಕ್ಕೆ ಪೇಟೆಂಟ್ ಪಡೆದು ಡಾಲರ್ ಕೋಟ್ಯಧೀಶನಾಗಲು ಸಾಧ್ಯವಿತ್ತು. ಆದರೆ ಪೆರ್ರಿ ಅದನ್ನು ಬಯಸಲಿಲ್ಲ. ಲೋಕ ಕಲ್ಯಾಣಕ್ಕೆಂದು ತನ್ನ ಸೋಸು ಪರದೆಯ ತಾಂತ್ರಿಕ ವಿವರಗಳನ್ನು ಮುಕ್ತವಾಗಿ ಬಿಡುಗಡೆ ಮಾಡಿ ಸೈ ಎನ್ನಿಸಿಕೊಂಡ.

ಕೊಳೆನೀರು, ಕೊಳೆಗೇರಿ, ಜಲದಾರಿದ್ರ್ಯಗಳ ಬಗ್ಗೆ ಏನೂ ಗೊತ್ತಿಲ್ಲದ ಅಮೆರಿಕದ ಮಧ್ಯಮ ವರ್ಗದ ಮಕ್ಕಳಿಗೆ ಭಾರತದ ಕೊಳಗೇರಿಗಳು ಹೊಸ ಸಂಶೋಧನೆಯ ಅವಕಾಶಗಳನ್ನು ತೆರೆದು ತೋರಿಸಿದವು. ಆದರೆ ಭಾರತದಲ್ಲೇ ಹುಟ್ಟಿ ಬೆಳೆದ ರಾಜೇಂದ್ರ ಸಿಂಗ್‌ಗೆ ಹೊಸತಲ್ಲದ, ತೀರ ಹಳೇ ಸಂಪ್ರದಾಯಗಳ ಬಗೆಗೆ ಆಸಕ್ತಿ ಇತ್ತು. ರಾಜಸ್ತಾನದಲ್ಲಿ ಮೂಲೆಗುಂಪಾಗುತ್ತಿದ್ದ ಪುರಾತನ ಜಲಖಜಾನೆಗಳು ಜಾಡು ಹಿಡಿದು ಅವರು 1985ರಲ್ಲಿ ಹಳ್ಳಿಗಳನ್ನು ಅಲೆಯತೊಡಗಿದ್ದರು. ಹಿಂದೊಂದು ಕಾಲದಲ್ಲಿ ಧಾನ್ಯದ ಮಾರುಕಟ್ಟೆ ಎನಿಸಿದ್ದ ಅಲ್ವಾರ್ ಪಟ್ಟಣದ ಸುತ್ತಮುತ್ತ ಬರ ಆಕ್ರಮಿಸಿತ್ತು. ಕೆರೆಕಟ್ಟೆಗಳೆಲ್ಲ ಬರಿದಾಗಿ, ಗಿಡಮರಗಳೆಲ್ಲ ಕಣ್ಮರೆಯಾಗಿ, ಹಳ್ಳಿಗಳೆಲ್ಲ ಬಿಕೋ ಎನ್ನುತ್ತಿದ್ದವು. ಏಕೆಂದರೆ ಪುರಾತನ ಕಾಲದ ಸಾಂಪ್ರದಾಯಿಕ 'ಜೋಹಡ್' ಎಂಬ ನೀರುಕಟ್ಟೆಗಳೆಲ್ಲ ಬರೀ ಒಣದೂಳಿನ ಗುಂಡಿಗಳಾಗಿದ್ದವು. ಯುವಕರೆಲ್ಲ ಊರುಬಿಟ್ಟು ಪಟ್ಟಣ ಸೇರಿದ್ದರು. ಅನುಕೂಲಸ್ಥ ಕೆಲವರು ಕೊಳವೆ ಬಾವಿಗಳಿಂದ ಹಗಲೂ ರಾತ್ರಿ ನೀರೆತ್ತಿ ಅಂತರ್ಜಲವನ್ನು ಬರಿದು ಮಾಡಿದ್ದರು. ಇಡೀ ಅಲ್ವಾರ್ ಜಿಲ್ಲೆಯನ್ನೇ ಕಪ್ಪು ಜಿಲ್ಲೆ ಎಂದು ಸರ್ಕಾರ ಘೋಷಿಸಿತ್ತು.

ಭಣಗುಡವು ಊರಿಂದ ಊರಿಗೆ ಅಲೆದಾಡುತ್ತ ರಾಜೇಂದ್ರ ಸಿಂಗ್ ಅಲ್ಲಲ್ಲಿ ಇದ್ದ ಬದ್ದ ಕೆಲವು ಯುವಕರನ್ನು ಸೇರಿಸಿ 'ತರುಣ ಭಾರತ ಸಂಘ'ವನ್ನು ಕಟ್ಟಿ ಅಲ್ಲಿನ ನೀರ್ಕಟ್ಟೆಗಳಿಗೆ ಮರುಜೀವ ಕೊಡುವ ಕೆಲಸವನ್ನು ಪ್ರಾರಂಭಿಸಿದರು. ಹನಿಹನಿ ಮಳೆನೀರೂ ಆಯಾ ಊರಿನ ಕಟ್ಟೆಗಳಲ್ಲೇ ಸಂಗ್ರಹವಾಗುವಂತೆ ಶ್ರಮದಾನ ಮಾಡಿದರು. ಮೊದಲ ಮೂರು ನಾಲ್ಕು ವರ್ಷಗಳ ಎದೆಗುಂದಿಸುವ ಸಾಹಸದ ನಂತರ ಕೆರೆಕಟ್ಟೆಗಳು ತುಂಬಿದವು. ಭೂಮಿ ಜೀವಂತವಾಯಿತು. ವರ್ಷವಿಡೀ ಹಣ್ಣು, ತರಕಾರಿ, ದವಸ ಧಾನ್ಯಗಳನ್ನು ಬೆಳೆಯುವ ಅವಕಾಶ ಸಿಕ್ಕಿದ್ದರಿಂದ ವಲಸೆ ಹೋಗಿದ್ದವರು ಊರಿಗೆ ಮರಳಿ ಬಂದರು. ದೂರದ ಉರುಗಳ ಜನರೂ ರಾಜೇಂದ್ರ ಸಿಂಗರ ತರುಣ ಭಾರತ ತಂಡದ ನೆರವು ಕೋರತೊಡಗಿದರು. ಸುಮಾರು 60 ವರ್ಷಗಳಿಂದ ಚಲನೆಯನ್ನೇ ಮರೆತಿದ್ದ ಅರ್ವಾರಿ ನದಿ ಕ್ರಮೇಣ ಏಪ್ರಿಲ್ ವರೆಗೆ ಹರಿಯುವುದನ್ನು ಕಲಿಯಿತು. ಮುಂದಿನ ಕೆಲ ವರ್ಷಗಳಲ್ಲಿ ಜೂನ್ ವರೆಗೂ ಹರಿಯುತ್ತ ಹೊಸ ಮಳೆಗಾಲದಲ್ಲಿ ಮತ್ತೆ ಮೈತುಂಬಿ ದಾಖಲೆ ಬರೆಯಿತು. ಅರ್ವಾರಿ ನದಿಗೆ ಅಂತರರಾಷ್ಟ್ರೀಯ ನದಿ ಪ್ರಶಸ್ತಿ ಲಭಿಸಿತು.

ಜೋಹಡ್ ಎಂಬ ನೀರ್ಕಟ್ಟೆಗಳ ಮೂಲಕ ನಡೆದು ಹೋದ ಈ ಜಾದೂವನ್ನು ನೋಡಲೆಂದು ರಾಷ್ಟ್ರಪತಿ ಕೆ.ಆರ್. ನಾರಾಯಣನ್ ಖುದ್ದಾಗಿ ಬಂದರು. 'ಓಡುವ ನೀರನ್ನು ನಡೆಯುವಂತೆ ಮಾಡಿ; ನಡೆಯುವ ಧಾರೆ ಅಲ್ಲೇ ನಿಲ್ಲುವಂತೆ ಮಾಡಿ; ನಿಂತ ನೀರು ಅಲ್ಲೇ ಇಂಗುವಂತೆ ಮಾಡಿ' ಎಂಬ ಮಾತು ಎಲ್ಲ ಹಳ್ಳಿಕೊಳ್ಳಗಳಲ್ಲಿ ಪ್ರತಿಧ್ವನಿಸಿದವು. 1998ರ ಹೊತ್ತಿಗೆ ರಾಜಸ್ತಾನದ 850 ಗ್ರಾಮಗಳಲ್ಲಿ 4500 ನೀರ್ಕಟ್ಟೆಗಳು ಸಿದ್ಧವಾದವು. ಅರ್ವಾರಿ ನದಿಯ ಮಾದರಿಯಲ್ಲಿ ರೂಪಾರೆಲ್, ಭಾಗಣಿ ನದಿ, ಸಾರ್ಸಾ ನದಿ, ಜಹಜ್ವಾಲಿ ನದಿಗಳೂ ಮತ್ತೆ ಜೀವ ತಳೆದವು. ರಾಜೇಂದ್ರ ಸಿಂಗರಿಗೆ ಮ್ಯಾಗ್ಸೆಸೆ ಪ್ರಶಸ್ತಿ ಲಭಿಸಿತು.

ಅಂದು ನರೇಗಾ, ಮನ್ರೇಗಾ ಯಾವುದೂ ಇರಲಿಲ್ಲ. 'ಕೂಲಿಗಾಗಿ ಕಾಳು' ಕೂಡ ಸಿಗುತ್ತಿರಲಿಲ್ಲ. 'ಕೂಲಿಗಾಗಿ ಕಾಳು' ಕೂಡ ಸಿಗುತ್ತಿರಲಿಲ್ಲ. ಊರೂರಲ್ಲಿ ಜೆಸಿಬಿಗಳು, ಬುಲ್ಡೋಜರ್‌ಗಳು ಇರಲಿಲ್ಲ. ಜನರು ತಾವಾಗಿ ಬಂದು ಕೈಯಾರೆ ಬಗ್ಗಿ ಎದ್ದು ತಂತಮ್ಮ ಊರಿನ ಕೆರೆಗಳ ಹೂಳೆತ್ತುತ್ತಿದ್ದರು. ಒಂದು ಊರಿನ ಯಶಸ್ಸೇ ಇನ್ನೊಂದು ಉರಿಗೆ ಪ್ರೇರಕವಾಗುತ್ತಿತ್ತು. ಜನರನ್ನು ಹುರಿದುಂಬಿಸಬಲ್ಲ, ನಿಸ್ವಾರ್ಥ ನಾಯಕನ ಪ್ರೇರಣೆ ಇತ್ತು. ಅಂಥ ನಾಯಕತ್ವವನ್ನು ರಾಜಸ್ತಾನದ ಜನರಿಗೆ ಕೊಟ್ಟಿದ್ದಕ್ಕೆ ರಾಜೇಂದ್ರಸಿಂಗರಿಗೆ ಒಂದೂವರೆ ಲಕ್ಷ ಡಾಲರ್ ಮೌಲ್ಯದ ಸ್ಟಾಕ್ ಹೋಮ್ ಜಲ ಸನ್ಮಾನ ಕೂಡ ಸಿಕ್ಕಿತು. 'ನೀರಿನ ಸಮಸ್ಯೆಯನ್ನು ಕೇವಲ ವಿಜ್ಞಾನ ತಂತ್ರಜ್ಞಾನದಿಂದಷ್ಟೇ ಪರಿಹರಿಸಲು ಸಾಧ್ಯವಿಲ್ಲ... ನೀರಿನ ಸುಸ್ಥಿರ ನಿರ್ವಹಣೆ ಕುರಿತಂತೆ ರಾಜೇಂದ್ರಸಿಂಗ್ ಅವರ ಸಾಧನೆಗಳು ಎಲ್ಲರಿಗೂ ಮಾದರಿಯಾಗಬೇಕು' ಎಂದು ಪ್ರಶಸ್ತಿ ಪತ್ರದಲ್ಲಿ ಶ್ಲಾಘನೆ ಬಂತು.

ನೊಬೆಲ್ ಪ್ರಶಸ್ತಿಗಳ ಉಗಮಸ್ಥಾನವೆನಿಸಿದ ಸ್ವೀಡಿಶ್ ನಗರ ಸ್ಟಾಕ್‌ಹೋಮ್‌ನಲ್ಲಿ ಜಾಗತಿಕ ಮಾನ್ಯತೆ Stockholm International Water Institute (SIWI) ಸಂಸ್ಥೆ ಕೂಡ ಇದೆ. ನೀರಿಗೆ ಸಂಬಂಧಿಸಿದ ಎಲ್ಲ ಬಗೆಯ ಸಮಸ್ಯೆಗಳ ಪರಿಹಾರಕ್ಕೆ ಮುಡಿಪಾಗಿರುವ ಈ ಸಂಸ್ಥೆ ಪ್ರತಿ ವರ್ಷ ಆಗಸ್ಟ್ 28ರಿಂದ ಒಂದು ವಾರದ ಕಾಲ **'ವಿಶ್ವ ಜಲಸಪ್ತಾಹ'**ವನ್ನು ಆಚರಿಸುತ್ತದೆ. ಈ ವರ್ಷ ಹೊಸದಾಗಿ ಒಂದು 'ಐಡಿಯಾ ಮಾರುಕಟ್ಟೆ'ಯನ್ನು ಆರಂಭಿಸಲಿದೆ. ನೀರು ಮತ್ತು ಸುಸ್ಥಿರ ಅಭಿವೃದ್ಧಿಗೆ ಸಂಬಂಧಿಸಿದಂತೆ ಯಾರಿಗೆ ಏನೇ ಹೊಸ ಐಡಿಯಾ ಹೊಳೆದರೂ ಇದೇ ಮೇ 20ರೊಳಗಾಗಿ ತಮ್ಮ ಪ್ರಸ್ತಾವನೆಯನ್ನು siwi.org ಜಾಲತಾಣದಲ್ಲಿ ಸೇರ್ಪಡೆ ಮಾಡಲು ಅವಕಾಶವಿದೆ. ನೀರಿನ ಮಿತವ್ಯಯ, ಶುದ್ಧೀಕರಣ, ಮರುಬಳಕೆ, ಕೆರೆಗಳ ಮರುಸೃಷ್ಟಿ ಹೀಗೆ ನಾನಾ ಬಗೆಯಲ್ಲಿ ಜಲಕ್ಕೆ ಜೀವ ತುಂಬುವ ಹೊಸದೇನಾದರೂ ಯೋಚನೆ ಬಂದಿದ್ದರೆ, ಐಡಿಯಾ ಮಾರುಕಟ್ಟೆಯಲ್ಲಿ ಅದಕ್ಕೆ ಮಾನ್ಯತೆ ಸಿಕ್ಕರೂ ಸಿಗಬಹುದು. ಸಿಕ್ಕರೆ ಅದನ್ನು ಜಾರಿಗೆ ತರಲು ಧನಸಹಾಯ, ತಂತ್ರಜ್ಞಾನದ ನೆರವು ಸಿಗುವಂತೆ ಈ ಸಂಸ್ಥೆ ಸಹಾಯ ಮಾಡುತ್ತದೆ. ಕನ್ನಡಿಗರೂ ಒಂದು ಕೈ ನೋಡಬಹುದು. ಚಿಂತೆಯ ಕಾರ್ಮೋಡದ ಮಧ್ಯೆ ಹೊಸದೊಂದು ಮಿಂಚಿಗಾಗಿ ನಾವೆಲ್ಲ ಕಾಯುತ್ತಿದ್ದೇವೆ. ನೆಲವೂ ಕಾದಿದೆ.

ಲೇಖಕ : **ಶ್ರೀ ನಾಗೇಶ ಹೆಗಡೆ**

ಕೃಪೆ: **ಪ್ರಜಾವಾಣಿ**

ಗುರುವಾರ, 5 ಮೇ 2016

# ಧನ್ಯವಾದಗಳು



ಬಿದರ್‌ನ ಶ್ರೀ ಶಾಹೀನ್ ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕ ಕಾರ್ಯದರ್ಶಿ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಬೀದರ್ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರೂ ಆದ ಡಾ. ಅಬ್ದುಲ್ ಖದೀರ್ ರವರು ಪ್ರಸಕ್ತ ವರ್ಷದಿಂದ ಬೀದರ್‌ನ ಶಾಹೀನ್ ಕಾಲೇಜಿನಲ್ಲಿ 5 ಸ್ಕೌಟ್ಸ್-5 ಗೈಡ್ಸ್‌ಗಳಿಗೆ ತಮ್ಮ ಕಾಲೇಜಿನಲ್ಲಿ ಉಚಿತ ವಿದ್ಯಾಭ್ಯಾಸ ನೀಡಲು ಅವಕಾಶ ಕಲ್ಪಿಸಿಕೊಟ್ಟಿರುತ್ತಾರೆ. ಶ್ರೀಯುತರಿಗೆ ಹೃತ್ಪೂರ್ವಕ ಧನ್ಯವಾದಗಳು

ರಾಜ್ಯ ಕಾರ್ಯದರ್ಶಿ

# CONGRATULATIONS





The Bharat Scouts and Guides
INDIA

*Nomination*

In exercise of the powers and functions of the Chief National Commissioner contained in the Rules Book of the Bharat Scouts & Guides, I am pleased to nominate

**Ms. Meghana S.Belavadi**

of Karnataka State as the Chairperson of National Youth Committee of the Bharat Scouts & Guides for the term ending November, 2016.

(B. I. NAGARALE)
CHIEF NATIONAL COMMISSIONER

# ಜಿಲ್ಲಾ ವಾರ್ತೆಗಳು............

## ಬೆಳಗಾವಿ

ದಿನಾಂಕ : 13-04-2016 ರಂದು ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ರಾಮದುರ್ಗ ಇಲ್ಲಿ ರೋವರ್-ರೇಂಜರ್ಸ್‌ಗಳಿಗೆ ದೀಕ್ಷಾ ಸಮಾರಂಭ ಕಾರ್ಯಕ್ರಮವು ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಮಹಾ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀ ಎ.ಎಸ್. ಲಾಲಸಂಗಿ ವಹಿಸಿದ್ದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಸಿ.ಎಸ್.ಬಿ. ಕಾಲೇಜಿನ ರೇಂಜರ್ ಲೀಡರ್ ಶ್ರೀಮತಿ ವ್ಹಿ.ಎಸ್. ಜೋಶಿ, ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ ಸಂಘಟಕರು ಆಗಮಿಸಿದ್ದರು. ಶ್ರೀ ಕೆ.ಎಂ. ಸಾರವಾನ, ಆರ್.ಎಸ್.ಎಲ್. ಶ್ರೀಮತಿ ಎಸ್.ಎಚ್. ಅಜ್ಜನ್ನವರ, ರೇಂಜರ್ ಲೀಡರ್ ಹಾಗು ಇನ್ನೋರ್ವ ಪ್ರಾಧ್ಯಾಪಕರಾದ ಶ್ರೀ ಮಹಾಂತೇಶ ಹೋಳಿಮಠ ಉಪಸ್ಥಿತರಿದ್ದರು.

* ದಿನಾಂಕ 14-04-2016 ರಂದು ಭಾರತರತ್ನ, ಸಂವಿಧಾನಶಿಲ್ಪಿ ಡಾ॥ ಬಿ.ಆರ್. ಅಂಬೇಡ್ಕರ್ ರವರ 125ನೇ ಜನ್ಮ ದಿನಾಚರಣೆ ನಿಮಿತ್ತ ಜಿಲ್ಲಾ ಸ್ಕೌಟ್ ಭವನದಲ್ಲಿ ಅಂಬೇಡ್ಕರ್ ಭಾವ ಚಿತ್ರಕ್ಕೆ ಪೂಜೆಯನ್ನು ಸಲ್ಲಿಸಲಾಯಿತು. ಪೂಜಾ ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಭಾಗವಹಿಸಿದ್ದರು. ಸರಕಾರಿ ಕನ್ನಡ ಕಿರಿಯ ಪ್ರಾಥಮಿಕ ಶಾಲೆ ನಂ. 20 ಟಿಳಕವಾಡಿ ಯಲ್ಲಿಯೂ ಸಹ ಅಂಬೇಡ್ಕರ್ ರವರ ಜನ್ಮ ದಿನಾಚರಣೆ ಆಚರಿಸಲಾಯಿತು.

## Bangalore South

Rover Scouts of HAL Rover Crew organized a Summer Camp for Children of Employees at HAL Sports club from 18th to 23rd April 2016 and the other one for Under privileged children, exclusively on Scouting Activities from 25th to 30th April 2016 at HAL Senior Officers Enclave.

The Camp at HAL Sports club was Inaugurated by Sri Venkateshwara Rao, General Manager of Facility Management Division and Sri Satish Kadamanavar, Vice President, HAL Employees Association (HAEA) presided over the function. Nearly 50 Children took part in the camp. Smt Kumudhavalli, PRO, Mrs.Yashodha and Mr. Selvam, Officers of the security were the Chief Guests.

The Camp at Senior Officers Enclave was Inaugurated by Dr. (Mrs.) Ramani Raju, Patron, HAL Family Welfare Association. Nearly 58 children took part in the camp

Various Scouting activities like Flag Drill, Knots, Lashing, Compass, Estimation, Construction of Improvised Shelter, Fire Fighting, First Aid etc., were conducted Smt. Sujatha, Smt. Anitha, Sri Sripad Sri Vikram and Sri Girish assisted the camp

# ದಕ್ಷಿಣ ಕನ್ನಡ

* ಬಾಳಿಲ ವಿದ್ಯಾಬೋಧಿನೀ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ವಿದ್ಯಾಬೋಧಿನೀ ಸ್ಕೌಟ್ಸ್–ಗೈಡ್ಸ್ ದಳಗಳಿಗೆ ಹೊರಸಂಚಾರ ಕಾರ್ಯಕ್ರಮವನ್ನು ಏಪ್ರಿಲ್ 14 ಮತ್ತು 15, 2016 ರಂದು ಹಮ್ಮಿಕೊಳ್ಳಲಾಗಿತ್ತು. 31 ಸ್ಕೌಟ್ಸ್ ಹಾಗೂ 26 ಗೈಡ್‌ಗಳು ಭಾಗವಹಿಸಿದ ಈ ಹೊರಸಂಚಾರದಲ್ಲಿ ಗಮನಿಸುವಿಕೆ, ವನವಿದ್ಯಾ ಸಂಕೇತಗಳು ಮುಂತಾದ ಚಟುವಟಿಕೆಗಳ ಸಹಾಯದಿಂದ, ಪಂಜ ಗುತ್ತಿಗಾರ ಮೂಲಕ ಏಳಲಂಬೆಯ ಶಂಖಪಾಲ ಸುಬ್ರಹ್ಮಣ್ಯೇಶ್ವರ ದೇವಳ ತಲುಪಿದರು.

ದೇವಳದ ವಠಾರದಲ್ಲಿ ರಾತ್ರಿ ವಾಸ್ತವ್ಯವಿದ್ದು, ಶಿಬಿರಾಗ್ನಿ ಕಾರ್ಯಕ್ರಮ ನಡೆಸಿದರು. ವೇ।ಮೂ। ಸುಬ್ರಾಯ ಕೆದಿಲಾಯ ಶಿಬಿರಾಗ್ನಿ ಉದ್ಘಾಟಿಸಿದರು. ಶ್ರೀಮತಿ ಸರೋಜಿನಿ ಗಂಗಯ್ಯ ಮುಳುಗಾಡು, ಶ್ರೀ ಪಿ.ಎಸ್. ಗಂಗಾಧರ ಮುಚ್ಚಿಪ್ಪಾಡಿ, ಶ್ರೀ ವೆಂಕಟ್ ವಳಲಂಬೆ, ಶ್ರೀ ಮಾಧವ ಮೂಕಮಲೆ ಶುಭಹಾರೈಸಿದರು. ವಿದ್ಯಾಬೋಧೀನೀ ಪ್ರೌಢಶಾಲೆಯ ಮುಖ್ಯ ಗುರುಗಳಾದ ಶ್ರೀ ಎಂ.ಎಸ್. ಶಿವರಾಮ ಶಾಸ್ತ್ರಿ ಸ್ವಾಗತಿಸಿದರು. ಮರುದಿನ ಮುಂಜಾನೆ ದೇವಳದ ಸಭಾಂಗಣದಲ್ಲಿ ಸರ್ವಧರ್ಮ ಪ್ರಾರ್ಥನೆ ಮಾಡಿ ಶ್ರೀ ದೇವರ ದರ್ಶನ ಪಡೆದು, ವಠಾರ ಶುಚಿಗೊಳಿಸಿ ಅಲ್ಲಿಂದ ವಿರಮಿಸಿದರು.

* ದಿನಾಂಕ 14–04–2016 ರಿಂದ 17–04–2016 ರ ವರೆಗೆ ಅಬ್ಬಕ್ಕೆ ಗೈಡ್ ದಳ, ದ.ಕ.ಜಿ.ಪಂ.ಮಾದರಿ ಹಿರಿಯ ಪ್ರಾಥಮಿಕ ಶಾಲೆ ನರಿಂಗಾನ ವತಿಯಿಂದ ಆಹ್ವಾಹಿತ ಶಾಲೆಗಳ ಸ್ಕೌಟ್–ಗೈಡ್‌ಗಳಿಗಾಗಿ 3 ದಿನಗಳ ಭಾವೈಕ್ಯತಾ ಶಿಬಿರವು ನರಿಂಗಾನ ಶಾಲೆಯಲ್ಲಿ ನಡೆಯಿತು. ನರಿಂಗಾನ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ಇಸ್ಮಾಯಿಲ್ ಮೀನಂಕೋಡಿ ಉದ್ಘಾಟನೆ ಮಾಡಿದರು. ಶಾಲಾ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಅಬೂಬಕರ್ ಆಳ್ವರ ಬೆಟ್ಟು, ಅಧ್ಯಕ್ಷತೆ ವಹಿಸಿದ್ದರು. ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಸಂತೋಷ್ ಕುಮಾರ್ ರೈ ಬೋಳಿಯಾರ್, ನರಿಂಗಾನ ಗ್ರಾಮ ಪಂಚಾಯತ್ ಸದಸ್ಯರಾದ ಶ್ರೀ ಅಬ್ದುಲ್ ರಹಮಾನ್, ಶ್ರೀ ಅಬ್ದುಲ್ ಲತೀಫ್, ಶ್ರೀ ಫಯಾಝ್, ಶ್ರೀ ಮುರಳೀಧರ ಶೆಟ್ಟಿ ಮತ್ತು ಮಂಜನಾಡಿ ಪಂಚಾಯತ್ ಸದಸ್ಯರಾದ ಶ್ರೀ ಇಸ್ಮಾಯಿಲ್, ಶ್ರೀಮತಿ ಸಿ.ಆರ್.ಪಿ. ಪ್ರಮೀಳ ಶ್ರೀ ಮುಡಿಪು ಮಿಥುನ ರಾಜ್, ದ.ಕ,ಜಿ.ಪ. ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರಾದ ಶ್ರೀ ವಸಂತ ಕೋಡಿ, ಶ್ರೀ ಪ್ರಭಾಕರ್ ಜೋಗಿ, ಶ್ರೀ ಮಂಜುನಾಥ್ ಮತ್ತು ಸ್ಕೌಟ್–ಗೈಡ್ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಚಂದ್ರಶೇಖರ್ ಶೆಟ್ಟಿ, ಕಾರ್ಯದರ್ಶಿ ಶ್ರೀ ಫೆಲಿಕ್ಸ್ ಡಿ'ಸೋಜ ಉಪಸ್ಥಿತರಿದ್ದರು.

ಶಿಬಿರದ ನಾಯಕರು ಮತ್ತು ರಾಮಕೃಷ್ಣ ಪ್ರೌಢಶಾಲೆ ಹರೇಕಳ ಇಲ್ಲಿನ ಸ್ಕೌಟ್ ಮಾಸ್ಟರ್ ಶ್ರೀ ತ್ಯಾಗಂ ಹರೇಕಳ ಕಾರ್ಯಕ್ರಮ ನಿರೂಪಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ಪ್ಲೇವಿ ಡಿ'ಸೋಜ ಸ್ವಾಗತಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ವಿನುತಾ ರೈ ಧನ್ಯವಾದ ಅರ್ಪಿಸಿದರು.

# ಹಾಸನ

ದಿನಾಂಕ : 07–05–2016 ರಂದು ಅರಸೀಕೆರೆ ನಗರದ ವಿವೇಕಾನಂದ ಶಿಕ್ಷಣ ಕಾಲೇಜಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಹಾಸನ ಹಾಗು ಸ್ಥಳೀಯ ಸಂಸ್ಥೆ ಅರಸೀಕೆರೆ ವತಿಯಿಂದ ಒಂದು ದಿನದ "ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಪರಿಚಯಾತ್ಮಕ ಕಾರ್ಯಕ್ರಮ" ವನ್ನು ವ್ಯವಸ್ಥೆಗೊಳಿಸಲಾಗಿತ್ತು.

ಈ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆಯ ಜಿಲ್ಲಾ ಸಂಘಟಕರಾದ ಶ್ರೀ ಜೆ.ಎಲ್. ಲೀಲಾಮಹೇಶ್ವರ್, ಶ್ರೀಮತಿ ಕೆ.ಪಿ. ಕಾತ್ಯಾಯಿನಿ ಮತ್ತು ಶ್ರೀಮತಿ ವನಜಾಕ್ಷಿ ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಡಾ.ಹೆಚ್. ಮುದ್ದುಮಲ್ಲೇಶ್ ಮತ್ತು ಸಹಾಯಕ ಪ್ರಾಧ್ಯಾಪಕರಾದ ಶ್ರೀ ಕಾಂತರಾಜ್ ಎಂ.ಎಸ್. ಇವರು ಉಪಸ್ಥಿತರಿದ್ದರು.

* ದಿನಾಂಕ 24-05-2016 ರಂದು ಸಾರ್ವಜನಿಕ ಶಿಕ್ಷಣ ಇಲಾಖೆ, ಅರಸೀಕೆರೆ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಅರಸೀಕೆರೆ ವತಿಯಿಂದ ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಪರಿಚಯಾತ್ಮಕ ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದ ಜಿಲ್ಲಾ ಸಂಘಟಕ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಜೆ.ಎಲ್. ಲೀಲಾಮಹೇಶ್ವರ ಹಾಗೂ ಜಿಲ್ಲಾ ತರಬೇತಿ ಆಯುಕ್ತೆ (ಗೈಡ್) ಬಿ. ಕಾಮೇಶ್ವರಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಉದ್ದೇಶ, ಸಿದ್ಧಾಂತ, ತರಬೇತಿ ವಿಧಾನಗಳನ್ನು ವಿವರಿಸಿದರು. ಇಂದಿನ ಬಾಲಕ, ಬಾಲಕಿಯರಿಗೆ ಹಾಗೂ ಯುವಕ, ಯುವತಿಯರಿಗೆ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಮಹತ್ವ ಮತ್ತು ಪ್ರಾಮುಖ್ಯತೆಯನ್ನು ವಿವರಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ಅರಸೀಕೆರೆ ವತಿಯಿಂದ ಪ್ರಾಥಮಿಕ, ಪ್ರೌಢಶಾಲಾ ಮಕ್ಕಳಿಗೆ ಮತ್ತು ಶಿಕ್ಷಕ, ಶಿಕ್ಷಕಿಯರಿಗೆ ನೀಡಲಾಗುತ್ತಿರುವ ತರಬೇತಿ ಕಾರ್ಯಕ್ರಮಗಳ ಬಗ್ಗೆ ವಿವರಿಸಿದರು.

ತಾಲೂಕು ಮತ್ತು ಸಮೂಹ ಸಂಪನ್ಮೂಲ ವ್ಯಕ್ತಿಗಳಿಗಾಗಿ ವ್ಯವಸ್ಥೆಗೊಳಿಸಿದ್ದ ಈ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಬಿಇಒ ಶ್ರೀನಟರಾಜ್, ಉಪಾಧ್ಯಕ್ಷರುಗಳಾದ ಬಿಆರ್‌ಸಿ ಶ್ರೀ ಲಕ್ಷ್ಮಣ್ ಎಮ್. ಬಳೂಟಗಿ ಮತ್ತು ಟಿಪಿಇಒ ಶ್ರೀ ತಿಮ್ಮೇಶ್ ಉಪಸ್ಥಿತರಿದ್ದರು.

## ಕೊಡಗು

ದಿನಾಂಕ : 06-04-2016 ರಂದು ವಿರಾಜಪೇಟೆ ತಾಲ್ಲೂಕಿನ ಚೆನ್ನನಕೋಟೆಯ ಸ.ಹಿ.ಪ್ರಾ.ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್‌ನ ವತಿಯಿಂದ ದೀಕ್ಷಾ ಸಮಾರಂಭ ಮತ್ತು ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಆದಿನ ಪೂರ್ವಾಹ್ನ ಸ್ಥಳೀಯ ಶಾಲಾ ದಾನಿಗಳಾದ ಶ್ರೀ ವಾಟೇರಿರ ಸುರೇಶ್‌ರವರು ಹಾಗೂ ಯುವಕ ಸಂಘದ ಸದಸ್ಯರಾದ ಶ್ರೀ ಉರೇಸ್‌ರವರು ಮುಖ್ಯ ಅತಿಥಿಗಳಾಗಿ ಆಗಮಿಸಿ, ಸ್ಕೌಟ್ಸ್-ಗೈಡ್ಸ್‌ನಲ್ಲಿರುವ ಉದ್ದೇಶದ ಪ್ರಕಾರ ನಡೆದುಕೊಳ್ಳುತ್ತ, ಅದರ ಅನುಕೂಲತೆಗಳನ್ನು ಉಪಯೋಗಿಸಿಕೊಳ್ಳಬೇಕು ಎಂದು ನುಡಿದರು. ಶಾಲಾ ಮುಖ್ಯ ಶಿಕ್ಷಕರು, ಸಹಶಿಕ್ಷಕರು ಶುಭ ಹಾರೈಸಿದರು.

ನಂತರ ಆಹಾರ ತಯಾರಿಕಾ ಸ್ಪರ್ಧೆ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಮುಖ್ಯ ಶಿಕ್ಷಕಿ ಶ್ರೀಮತಿ ರೋಸಿರಾಣಿ ಮತ್ತು ಕ್ಲಸ್ಟರ್‌ನ ಸಿ.ಆರ್.ಪಿ. ಯವರಾದ ಶ್ರೀಮತಿ ರುಕ್ಮಿಣಿ ಚಾಲನೆ ನೀಡಿದರು.

ಸಂಜೆ ಭವ್ಯಶಿಬಿರಾಗ್ನಿ ಕಾರ್‍ಯಕ್ರಮ ಏರ್ಪಡಿಸಲಾಗಿತ್ತು. ಸಭಾ ಕಾರ್ಯಕ್ರಮವನ್ನು ಗ್ರಾಮ ಪಂಚಾಯಿತಿ ಸದಸ್ಯರಾದ ಶ್ರೀ ಗಣೇಶ್‌ರವರು, ಶಾಲಾ ದಾನಿಗಳಾದ ಶ್ರೀ ಮುರುವಂಡ ಗಣಪತಿ ಹಾಗೂ ಪೊನ್ನಪ್ಪನವರು ಸಸಿಗೆ ನೀರು

ಹಾಕುವುದರ ಮೂಲಕ ಉದ್ಘಾಟಿಸಿದರು. ಸಭೆಗೆ ಆಗಮಿಸಿದ ಎಲ್ಲರನ್ನು ಕಬ್ ಮಾಸ್ಟರ್ ಹಾಗೂ ತಾಲ್ಲೂಕು ಶಿಕ್ಷಕರ ಸಂಘದ ಕಾರ್ಯದರ್ಶಿಯಾದ ಶ್ರೀಮತಿ ವಾಮನರವರು ಸ್ವಾಗತಿಸಿದರು. ಜಿಲ್ಲಾ ಸ್ಕೌಟ್ಸ್ ಕಮೀಷನರ್ ಶ್ರೀ ಜಿಮ್ಮಿ ಸಿಕ್ವೇರಾರವರು ಪ್ರಾಸ್ತಾವಿಕ ಭಾಷಣದಲ್ಲಿ ಸ್ಕೌಟ್-ಗೈಡ್‌ನ ಧ್ಯೇಯೋದ್ದೇಶಗಳನ್ನು ಹೇಳಿದರು. ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಜಾಜಿಯವರು ವರದಿಯನ್ನು ವಾಚಿಸಿದರು. ಪ್ರಸಕ್ತ ಸಾಲಿನಲ್ಲಿ ಜಿಲ್ಲಾ ಪುರಸ್ಕಾರ ಪಡೆದ ವಿದ್ಯಾರ್ಥಿಗಳಿಗೆ ಹಾಗೂ ವಿಶೇಷ ಸಾಧನೆ (ಕ್ರೀಡೆ, ಸಂಗೀತ, ನೃತ್ಯ, ಸಮಾಜಸೇವೆ) ಮಾಡಿದವರಿಗೆ ಪ್ರಶಸ್ತಿ ಪತ್ರ ಹಾಗೂ ಬಹುಮಾನವನ್ನು ವೇದಿಕೆಯಲ್ಲಿರುವ ಗಣ್ಯರು ವಿತರಿಸಿದರು. ಸಭಾ ಅಧ್ಯಕ್ಷತೆ ವಹಿಸಿದ ಶಾಲಾ SDMC ಅಧ್ಯಕ್ಷರಾದ ಶ್ರೀ ಪ್ರಕಾಶ್‌ರವರು ವಿದ್ಯಾರ್ಥಿಗಳ ಸಾಧನೆ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತ, ಇನ್ನೂ ಹೆಚ್ಚೆಚ್ಚು ಸ್ಕೌಟ್-ಗೈಡ್ ಚಳವಳಿ ಗ್ರಾಮೀಣ ಪ್ರದೇಶದಲ್ಲಿ ಬೆಳೆಯಲಿ ಎಂದು ಹೇಳುತ್ತ ಶುಭ ಹಾರೈಸಿದರು. ಬಳಿಕ ಶಿಭಿರಾಗ್ನಿಯನ್ನು ದಾನಿಗಳಾದ ಶ್ರೀ ಎಂ. ಗಣಪತಿ ಉದ್ಘಾಟಿಸಿದರು. ಸ್ಕೌಟ್ಸ್-ಗೈಡ್ಸ್‌ಗಳು ಉತ್ತಮವಾದ ಸಾಂಸ್ಕೃತಿಕ ಕಾರ್ಯಕ್ರಮ ನೀಡಿದರು. ವಿದ್ಯಾರ್ಥಿಗಳ ಕಾರ್ಯಕ್ರಮ ಮೆಚ್ಚಿ, ಸ್ಥಳೀಯ J.C.I. ನ ಮಾಜಿ ಉಪಾಧ್ಯಕ್ಷರಾದ ಶ್ರೀ ರಾಮ್‌ದಾಸ್ ರವರು ಬಹುಮಾನವನ್ನು ನೀಡಿದರು. ಸ್ಕೌಟ್ಸ್ ಮಾಸ್ಟರ್ ಶ್ರೀಮತಿ ನಳಿನಾಕ್ಷಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಯವರು ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು

## ಮೈಸೂರು

ದಿನಾಂಕ : 03-05-2016 ರಂದು ನಂಜನಗೂಡು ತಿರುಮಲಾಂಬ ರೇಂಜರ್ಸ್ ಘಟಕ ಮತ್ತು ನಂಜನಗೂಡು ಜಿ.ವಿ.ಅಯ್ಯರ್ ರೋವರ್ಸ್ ಘಟಕದ ವತಿಯಿಂದ 2015-16ನೇ ಶೈಕ್ಷಣಿಕ ಸಾಲಿನ ಸಮಾರೋಪ ಸಮಾರಂಭವನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿತ್ತು.

ರೋವರ್ಸ್ ಲೀಡರ್ಸ್ ಆದ ಪ್ರೊ. ಎಂ.ಆರ್. ಬಸವಲಿಂಗಸ್ವಾಮಿಯವರು ಎಲ್ಲರನ್ನು ಸ್ವಾಗತಿಸಿದರು. ನಂತರ ದಿ॥ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಸೇವಾಜೀವಿಯಾಗಿದ್ದ ಕೊಂಡಜ್ಜಿ ಬಸಪ್ಪನವರ ಜೀವನ ಪರಿಚಯವನ್ನು ರೋವರ್ ಶ್ರೀ ಚಂದನ್ ರವರು ಪರಿಚಯಿಸಿದರು. ವಿವಿಧ ರ್‍ಯಾಲಿ ಮತ್ತು ತರಬೇತಿ ಶಿಬಿರಗಳಲ್ಲಿ ಭಾಗವಹಿಸಿದ ಅನುಭವಗಳನ್ನು ರೇಂಜರ್ಸ್ ಮತ್ತು ರೋವರ್ಸ್‌ಗಳು ಅಭಿವ್ಯಕ್ತಪಡಿಸಿದರು. ಘಟಕದ ವರದಿಯನ್ನು ರೇಂಜರ್ಸ್ ಲೀಡರ್ಸ್ ಆದ ಡಾ. ಸೀತಾ ಹೆಚ್.ಎನ್. ರವರು ಮಂಡಿಸಿದರು.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಡಾ. ಕೆ.ಬಿ. ಗುರುಮೂರ್ತಿ, ಖಜಾಂಚಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮೈಸೂರು ಇವರು ಘಟಕದಲ್ಲಿ ನಡೆದ ಕಾರ್ಯಕ್ರಮಗಳ ವಾರ್ಷಿಕ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು. ತಮ್ಮ ತಂದೆ ದಿ। ಕೊಂಡಜ್ಜಿ ಬಸಪ್ಪನವರ ಜೀವನದ ನೆನಪುಗಳನ್ನು ಹಂಚಿಕೊಂಡರು.

ಸಭೆಯಲ್ಲಿ ಹಾಜರಿದ್ದ ಮತ್ತೊಬ್ಬ ಮುಖ್ಯ ಅತಿಥಿಯಾಗಿದ್ದ ಶ್ರೀ ಭುಜಗೇಂದ್ರ, ತಾಲ್ಲೂಕು ಖಜಾಂಚಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ನಂಜನಗೂಡು ಇವರು ಮಾತನಾಡುತ್ತಾ, ನಾವೆಲ್ಲ ವಿಶ್ವಚಿತ್ತದತ್ತ ಕೈಚಾಚಬೇಕು. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಒಂದು ಕುಟುಂಬದಂತೆ, ಅದರಲ್ಲಿ ಸದಸ್ಯರಾದ ನಾವು ಸಂಸ್ಥೆಯ

ಸಂಸ್ಕಾರವನ್ನು ಬೆಳೆಸಿಕೊಳ್ಳಬೇಕು ಯಾವ ವಿಷಯವನ್ನಾಗಲಿ ಅಭ್ಯಾಸ ಮಾಡಿ ಅದನ್ನು ಜೀವನದಲ್ಲಿ ರೂಢಿಸಿಕೊಳ್ಳಬೇಕು ಎಂದು ನುಡಿದರು.

ವೇದಿಕೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಮೈಸೂರು ಜಿಲ್ಲಾ ಸಂಸ್ಥೆ, ಸ್ಥಾನಿಕ ಆಯುಕ್ತರಾದ ಶ್ರೀ ಅಜಯ್ ಕುಮಾರ್ ಜೈನ್ ರವರು ಉಪಸ್ಥಿತರಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಸಿ.ಎನ್. ಸತ್ಯನಾರಾಯಣ್‌ರವರು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ನಿಸ್ವಾರ್ಥ ಸೇವೆ, ವಿಶಾಲದೃಷ್ಟಿಯನ್ನು ಶ್ಲಾಘಿಸುತ್ತಾ ರೇಂಜರ್ಸ್ ಮತ್ತು ರೋವರ್ಸ್ ಘಟಕದಲ್ಲಿ ನಡೆದ ಎಲ್ಲಾ ಚಟುವಟಿಕೆಗಳ ಬಗ್ಗೆ ಪ್ರಶಂಶಿಸಿ, ಮುಂದಿನ ದಿನಗಳಲ್ಲಿ ಈ ಘಟಕ ಇನ್ನು ಹೆಚ್ಚು ಸಕ್ರಿಯವಾಗಿ ಕಾರ್ಯ ನಿರ್ವಹಿಸುವಂತೆ ಶುಭ ಹಾರೈಸಿದರು.

ರೇಂಜರ್ಸ್ ಮತ್ತು ರೋವರ್ಸ್ ಘಟಕದಿಂದ ಡಾ. ಕೆ.ಬಿ. ಗುರುಮೂರ್ತಿ ಹಾಗು ಜಂಟಿ ನಿರ್ದೇಶಕರಾದ ಪ್ರೊ.ಮೊರಬದ ಮಲ್ಲಿಕಾರ್ಜುನ ರವರನ್ನು ಸನ್ಮಾನಿಸಲಾಯಿತು. ವರ್ಷದ ಉತ್ತಮ ರೇಂಜರ್ಸ್ ಮತ್ತು ರೋವರ್ಸ್ ಎಂದು ಕು॥ ಸೌಮ್ಯ ಹರನಗಿರಿ ಹಾಗೂ ಕು॥ ಚಂದ್ರಹಾಸ ಅವರನ್ನು ಗೌರವಿಸಲಾಯಿತು. ಇನ್ನು ಅಂತಿಮ ವರ್ಷದ ರೇಂಜರ್ಸ್ ಮತ್ತು ರೋವರ್ಸ್‌ಗಳಿಗೆ ಪ್ರಮಾಣ ಪತ್ರ ಮತ್ತು ನೆನಪಿನ ಕಾಣಿಕೆ ನೀಡಲಾಯಿತು. ರೇಂಜರ್ ಆದ ಕು॥ ಸೌಮ್ಯ ಹರನಗಿರಿ ವಂದನಾರ್ಪಣೆ ಮಾಡಿದರು.

* ದಿನಾಂಕ 12-05-2016 ರಿಂದ 14-05-2016 ರ ವರೆಗೆ ಮೈಸೂರು ಜಿಲ್ಲೆಯಿಂದ 2016-17ನೇ ಸಾಲಿಗೆ ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆಯಲು ಸಿದ್ಧವಾಗಿರುವ ಸ್ಕೌಟ್ಸ್ ಗೈಡ್ಸ್‌ಗಳಿಗೆ ಶಿಬಿರವನ್ನು ಮೈಸೂರು ಜಿಲ್ಲಾ ಸಂಸ್ಥೆಯಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ 48 ಗೈಡ್ಸ್ ಮತ್ತು 36 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

ಈ ಶಿಬಿರದಲ್ಲಿ ಮಕ್ಕಳಿಗೆ ಪ್ರವೇಶದಿಂದ ರಾಜ್ಯ ಪುರಸ್ಕಾರದವರೆಗಿನ ಪಠ್ಯಕ್ರಮ ಹಾಗೂ ಪ್ರಾವೀಣ್ಯತಾ ಪದಕಗಳ ಬಗ್ಗೆ ತಿಳುವಳಿಕೆ ನೀಡಲಾಯಿತು.

ಡಾ. ಜಿ. ಸಿದ್ದೇಶ್, ಡಾ. ಕೆ.ಬಿ. ಗುರುಮೂರ್ತಿ, ಡಾ. ಸುಜಾತಾ ರಾವ್, ಶ್ರೀಮತಿ ಶಾರದಾರಾಜು, ಶ್ರೀ ಮಹದೇವಯ್ಯ, ಶ್ರೀ ಪಟ್ಟಾಬಿರಾಮಚಂದ್ರ, ಶ್ರೀ ಮೋಹನ್ ಕುಮಾರ್ ಶ್ರೀ ರಾಜಗೋಪಾಲ್ ಮತ್ತು ಶ್ರೀ ರಾಮ ಪ್ರಸಾದ್ ರವರು ಪ್ರಾವಿಣ್ಯತಾ ಪದಕಗಳ ಬಗ್ಗೆ ತಿಳುವಳಿಕೆ ನೀಡಿದರು.

ಶ್ರೀಮತಿ ರಾದಮ್ಮ, ಶ್ರೀಮತಿ ಮಹಾಲಕ್ಷ್ಮಿ, ಶ್ರೀಮತಿ ಲತಾ, ಶ್ರೀ ಅಜಯ್ ಕುಮಾರ್ ಜೈನ್, ಶ್ರೀ ನನ್ನೇಶ್, ಶ್ರೀ ಚಂದ್ರು, ಕು॥ ಲತಾ ರವರು ಪ್ರವೇಶದಿಂದ ರಾಜ್ಯಪುರಸ್ಕಾರದ ವರೆಗಿನ ಪಠ್ಯಕ್ರಮವನ್ನು ಬೋದಿಸಿದರು.

ಶ್ರೀಮತಿ ಮನೋಹರ ಭಟ್ ಗೈಡ್ ವಿಭಾಗಕ್ಕೆ ಹಾಗೂ ಶ್ರೀ ರಾಮಪ್ರಸಾದ್ ರವರು ಸ್ಕೌಟ್ ವಿಭಾಗಕ್ಕೆ ನಾಯಕರಾಗಿದ್ದರು.ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಶಿಬಿರಕ್ಕೆ ಭೇಟಿ ನೀಡಿ ಸ್ಕೌಟ್-ಗೈಡ್‌ಗಳಿಗೆ ಶುಭ ಹಾರೈಸಿದರು.

* ದಿನಾಂಕ 11-04-2016 ರಿಂದ 30-04-2016 ರ ವರೆಗೆ ಪ್ರಥಮ ಬಾರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಮೈಸೂರು ಜಿಲ್ಲಾ ಸಂಸ್ಥೆಯ ವತಿಯಿಂದ 'ರಜಾ-ಮಜಾ' ಬೇಸಿಗೆ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 55 ಮಕ್ಕಳು ಭಾಗವಹಿಸಿದ್ದರು. ಈ ಶಿಬಿರದ ಸಂಚಾಲಕರಾಗಿ ಶ್ರೀ ಅಜಯ್ ಕುಮಾರ್‌ಜೈನ್ ಕಾರ್ಯ ನಿರ್ವಹಿಸಿದರು.

ಶಿಬಿರವನ್ನು ದಿನಾಂಕ 11-05-2016 ರಂದು ಪಾಂಡವಪುರದ ಶ್ರೀ ಚಕ್ರೇಶ್ವರಿ ಪೀಠದ ಶ್ರೀಶ್ರೀ ಅವದೂತ ಸಿಂಹ ವಿದ್ಯಾಹಂಸ ಭಾರತೀ ಸ್ವಾಮಿಗಳು ಉದ್ಘಾಟಿಸಿದರು. ಡಾ. ಕೆ.ಬಿ. ಗುರುಮೂರ್ತಿಯವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಸ್. ರವಿಶಂಕರ್, ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಸಂಸ್ಥೆಯ ಪದಾದಿಕಾರಿಗಳು ಭಾಗವಹಿಸಿದ್ದರು.

ಸ್ಕೌಟ್ಸ್-ಗೈಡ್ಸ್‌ಗಳಿಗೆ ಶಿಬಿರದಲ್ಲಿ ಗಾಯನ, ನೃತ್ಯ, ಅಭಿನಯ ಕಲೆ, ಡ್ರಾಯಿಂಗ್ ಕರಕುಶಲ ಕಲೆಗಳನ್ನು ಹೇಳಿ ಕೊಡಲಾಯಿತು. ಯೋಗ ಸಾಹಸಮಯ ಚಟುವಟಿಕೆಗಳು, ವಿಶೇಷ ಅಡುಗೆ ತಯಾರಿಕೆ, ದೇಸಿ ಕ್ರೀಡೆಗಳು, ತೋಟಗಾರಿಕೆ, ಭಾಗವೀಗೆ, ದೇಶಭಕ್ತಿ ಗೀತೆಗಳನ್ನು ಹಾಡುವುದು, ರಸಪ್ರಶ್ನೆ ಕಾರ್ಯಕ್ರಮ ಮುಂತಾದ ಚಟುವಟಿಕೆಗಳನ್ನು ನಡೆಸಲಾಯಿತು. ಮ್ಯಾಜಿಕ್ ಷೋ, ಮಿಮಿಕ್ರೀ, ಮಾತನಾಡುವ ಗೊಂಬೆ, ಅಗ್ನಿಶಾಮಕ ದಳದವರಿಂದ ಪ್ರದರ್ಶನ, ಪರಿಸರ ರಕ್ಷಣೆ, ಸ್ವಚ್ಛತಾ ಕಾರ್ಯಕ್ರಮ, ಹಾವುಗಳ ಬಗ್ಗೆ ಅರಿವು ಮೂಡಿಸುವುದು, ಸ್ಕೌಟಿಂಗ್ ಮತ್ತು ಗೈಡಿಂಗ್ ಪರಿಚಯ, ಹೊರ ಸಂಚಾರ, ಸರ್ವಧರ್ಮ ಪ್ರಾರ್ಥನೆ, ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಮುಂತಾದ ಚಟುವಟಿಕೆಗಳನ್ನು ಈ ರಜಾ-ಮಜಾ ಬೇಸಿಗೆ ಶಿಬಿರದಲ್ಲಿ ಮಕ್ಕಳಿಗೆ ತಿಳಿಸಿಕೊಡಲಾಯಿತು. ಈ ಶಿಬಿರಕ್ಕೆ ಅನೇಕ ಕಲಾವಿದರು ಭೇಟಿನೀಡಿ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ತಮ್ಮ ಅನುಭವವನ್ನು ಹಂಚಿಕೊಂಡರು.

ದಿನಾಂಕ 29-06-2016 ರ ಸಂಜೆ 6.30 ಕ್ಕೆ ಭವ್ಯಶಿಭಿರಾಗ್ನಿ ಕಾರ್ಯಕ್ರಮ ನಡೆಸಲಾಯಿತು. ಮುಖ್ಯ ಅತಿಥಿಯಾಗಿ ಶ್ರೀಮತಿ ರೇಹನಾ ಭಾನು, ಅಧ್ಯಕ್ಷರು, ಮೃಗಾಲಯ ಪ್ರಾಧಿಕಾರ, ಮೈಸೂರು ರವರು ಆಗಮಿಸಿದ್ದರು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಡಾ. ಜೆ. ಕಮಲಾರಾಮನ್, ಉಪಾಧ್ಯಕ್ಷರು, ಡಾ. ಕೆ.ಬಿ. ಗುರುಮೂರ್ತಿ ಜಿಲ್ಲಾ ಖಜಾಂಚಿ, ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

ಶ್ರೀಮತಿ ರಾಧಮ್ಮ, ಶ್ರೀ ಆನಂದ ಮೂರ್ತಿ, ಶ್ರೀ ಸುದೀರ್ ಕುಮಾರ್, ಶ್ರೀಮತಿ ಲತಾ, ಶ್ರೀ ಆರ್.ಪಿ.ಚಂದ್ರು, ಶ್ರೀಮತಿ ಶೈಲಜಾ, ಶ್ರೀಮತಿ ಹರಿಣಿ, ಶ್ರೀಮತಿ ಸರಸ್ವತಿ ಸುರೇಶ್, ಶ್ರೀರಾಮ ಪ್ರಸಾದ್ ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸಿದರು. ಜಿಲ್ಲೆಯ ರೋವರ್ಸ್ ಮತ್ತು ರೇಂಜರ್ಸ್ ಶ್ರೀ ಪಿ.ಚಂದ್ರು ಮತ್ತು ಕು. ರೋಶಿನಿ ಪ್ರಸಾದ್ ನೇತೃತ್ವದಲ್ಲಿ ಸೇವೆಯನ್ನು ಸಲ್ಲಿಸಿರುತ್ತಾರೆ. ಶ್ರೀ ಎಮ್.ಎನ್. ಸುರೇಶ್ ಕುಮಾರ್, ಶ್ರೀಮತಿ ಸುಜಯ, ಶ್ರೀಮತಿ ಮನೋಹರ್ ಪ್ರಭ, ಶ್ರೀಮತಿ ಅಮೃತಮ್ಮನವರು ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಶಿಬಿರಕ್ಕೆ ಭೇಟಿ ನೀಡಿ, ಸಲಹೆ - ಸೂಚನೆಗಳನ್ನು ನೀಡಿ ಈ ರಜಾ - ಮಜಾ ಬೇಸಿಗೆ ಶಿಬಿರ ಯಶಸ್ವಿಯಾಗಲು ಸಹಕರಿಸಿದರು.

## ಉಡುಪಿ

ದಿನಾಂಕ : 06-04-2016 ರಿಂದ 08-04-2016 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರವು ಡಾ॥ ವಿ.ಎಸ್. ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ, ಅಲೆವೂರು ಇಲ್ಲಿ ನಡೆಯಿತು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಲ್ಲಿ ಶ್ರೀ ಬಿ. ಆನಂದ ಅಡಿಗ, ಗೈಡ್ ವಿಭಾಗದಲ್ಲಿ ಶ್ರೀಮತಿ ವನಿತಾ ಎಂ. ರಾವ್ ಇವರು ಕರ್ತವ್ಯ ನಿರ್ವಹಿಸಿದರು. ಜಿಲ್ಲೆಯಿಂದ ಸುಮಾರು 188 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಸಹನಾಯಕರಾಗಿ ಶ್ರೀ ಕೊಗ್ಗ ಗಾಣಿಗ, ಶ್ರೀ ಶಿವಾನಂದ್ ಶ್ರೀ ಉಮೇಶ್, ಶ್ರೀಮತಿ ಮಲ್ಲಿಕ, ಶ್ರೀಮತಿ ಸೆಲಿನ್, ಶ್ರಿಮತಿ ಅನಿತಾ ಸಹಕರಿಸಿದರು.

* ದಿನಾಂಕ 09-04-2016 ರಿಂದ 10-04-2016 ರ ವರೆಗೆ ಜಿಲ್ಲಾ ಮಟ್ಟದ ರೋವರ್-ರೇಂಜರ್ ರಾಜ್ಯಪುರಸ್ಕಾರ ಪೂರ್ವ ಸಿದ್ಧತಾ ಶಿಬಿರವು ಡಾ॥ ವಿ.ಎಸ್. ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ, ಅಲೆವೂರು ಇಲ್ಲಿ ನಡೆಯಿತು. ಶ್ರೀ ಬಿ. ಆನಂದ ಅಡಿಗ, ಶ್ರೀ ಉದಯ್ ಶೆಟ್ಟಿ ಕೆ. ಶ್ರೀ ನಿತಿನ್ ಅಮಿನ್, ಶ್ರೀಮತಿ ಸುಮನ್ ಶೇಖರ್ ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸಿದರು. ಜಿಲ್ಲೆಯಿಂದ ಸುಮಾರು 50 ರೋವರ್ ರೇಂಜರ್‌ಗಳು ಭಾಗವಹಿಸಿದ್ದರು.

* ದಿನಾಂಕ : 16-04-2016 ರಿಂದ 18-04-2016 ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ರಾಜ್ಯಪುರಸ್ಕಾರ ಪೂರ್ವ ಸಿದ್ಧತಾ ಶಿಬಿರವು ಡಾ॥ ವಿ.ಎಸ್. ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ, ಅಲೆವೂರು ಇಲ್ಲಿ ನಡೆಯಿತು. ಜಿಲ್ಲೆಯಿಂದ ಸುಮಾರು 125 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಲ್ಲಿ ಶ್ರೀ ಕೊಗ್ಗ ಗಾಣಿಗ, ಗೈಡ್ ವಿಭಾಗದಲ್ಲಿ ಶ್ರೀಮತಿ ವನಿತಾ ಎಂ. ರಾವ್ ಅವರು ಕಾರ್ಯ ನಿರ್ವಹಿಸಿದರು. ಶ್ರೀ ಪ್ರಭಾ ಕಲ್ಕೂರ್ ರವರು Disaster Management ಪದಕದ ಬಗ್ಗೆ ವಿವರಣೆಯನ್ನು ನೀಡಿದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್, ಶ್ರೀಮತಿ ಸುಮನ್ ಶೇಖರ್ ಶಿಬಿರ ಸಂಘಟಿಸಿದರು.

## ಶ್ರದ್ಧಾಂಜಲಿ



**ಶ್ರೀ ಓ. ಚನ್ನವೀರಪ್ಪ,** ವಯಸ್ಸು 63 ವರ್ಷ, ನಿವೃತ್ತ ನೌಕರರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಇವರು ದಿನಾಂಕ 26-05-2016 ರಂದು, ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿಯಲ್ಲಿ ನಿಧನರಾದರು. ಅವರು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ 36 ವರ್ಷಗಳು ಸೇವೆ ಸಲ್ಲಿಸಿದ್ದರು. ಅವರು ಒಬ್ಬ ಪುತ್ರ, ಒಬ್ಬ ಪುತ್ರಿ ಹಾಗೂ ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ.

ಶ್ರೀಯುತರ ನಿಧನದಿಂದ ಅವರ ಕುಟುಂಬವರ್ಗಕ್ಕೆ ಉಂಟಾದ ದುಃಖವನ್ನು ಭರಿಸುವ ಶಕ್ತಿಯನ್ನು ನೀಡಲೆಂದು ಮತ್ತು ಮೃತರ ಆತ್ಮಕ್ಕೆ ಶಾಂತಿ ದೊರಕಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

ಮುಂದುವರಿದ ಭಾಗ

## ಅಧ್ಯಾಯ – 4 ಶಿಬಿರಾಗ್ನಿ ಉದಂತ ಸಂ–11

# ಮಾರ್ಗ ಶೋಧನೆ

## (TRACKING)

## ಕುರುಹುಗಳ ಅವಲೋಕನ

**ಕುರುಹುಗಳನ್ನು ಗಮನಿಸುವುದು–ಜನರ ವಿವರಗಳು–ಶವದ ಸುತ್ತಲಿನ ಕುರುಹುಗಳು–ಹಳ್ಳಿಗಾಡು ಪ್ರದೇಶದ ವಿವರಗಳು–ಸ್ಕೌಟುಗಳು ತಮ್ಮ ಕಣ್ಣು, ಕಿವಿ ಮತ್ತು ಮೂಗುಗಳನ್ನುಪಯೋಗಿಸುವುದು–ರಾತ್ರಿಯ ವೇಳೆಯ ಸ್ಕೌಟಿಂಗ್**

### ಹಳ್ಳಿಗಾಡು ಪ್ರದೇಶದಲ್ಲಿ ಕುರುಹುಗಳು :

ನೀವು ಹಳ್ಳಿಗಾಡು ಪ್ರದೇಶದಲ್ಲಿದ್ದರೆ, ದೂರದ ಬೆಟ್ಟಗಳು, ದೇವಾಲಯ ಗೋಪುರಗಳು ಮತ್ತು ಹತ್ತಿರದ ವಿಚಿತ್ರ ಕಟ್ಟಡಗಳು, ಮರಗಳು, ಗೇಟುಗಳು, ಬಂಡೆಗಳು, ಇತ್ಯಾದಿ ಹೆಗ್ಗುರುತುಗಳನ್ನು ಗಮನಿಸಬೇಕು. ಇದರಿಂದ ನಿಮ್ಮ ದಾರಿಯನ್ನು ಕಂಡುಕೊಳ್ಳಲು ಅಥವಾ ದಾರಿತಪ್ಪದಂತೆ ಇರಲು ಸಹಾಯವಾಗುತ್ತದೆ.

ನೀವು ಈ ರೀತಿಯಲ್ಲಿ ಹೆಗ್ಗುರುತುಗಳನ್ನು ಗಮನಿಸುವುದರಿಂದ, ನಿಮಗೆ ಉಪಯೋಗವಾಗುವುದಷ್ಟೇ ಅಲ್ಲ, ಎಂದಾದರೊಂದು ದಿನ, ಬೇರೆಯವರಿಗೆ ಮಾರ್ಗದರ್ಶನ ನೀಡಲು ಬರುತ್ತದೆ. ಆದ್ದರಿಂದ ಹೆಗ್ಗುರುತುಗಳನ್ನು ಸೂಕ್ಷ್ಮವಾಗಿ ಗಮನಿಸಿ, ಅವಶ್ಯಕತೆ ಬಿದ್ದಾಗ, ಸಕ್ರಮವಾಗಿ, ತಪ್ಪಿಲ್ಲದೆ ತಿಳಿಸಿಕೊಡಲು ಬರಬೇಕೆಂಬುದನ್ನು ನೆನಪಿನಲ್ಲಿಡಿ. ಅದೇ ರೀತಿಯಲ್ಲಿ ರಸ್ತೆಗಳೂ, ಅಡ್ಡರಸ್ತೆಗಳು, ಗಲ್ಲಿಗಳು, ಕಾಲು ಹಾದಿಗಳನ್ನು ನೀವು ಗಮನಿಸಬೇಕು.

ಇಷ್ಟೇ ಅಲ್ಲದೆ, ಇತರೇ ಸಣ್ಣ ಪುಟ್ಟ ಗುರುತುಗಳನ್ನೂ, ನೀವು ಗಮನಿಸಬೇಕು. ಉದಾ: ಹಕ್ಕಿಗಳು ಇದ್ದಕ್ಕಿದ್ದಂತೆ ಎದ್ದು, ಅವಸರವಸರವಾಗಿ ಹಾರಲು ಪ್ರಾರಂಭಿಸುತ್ತವೆಂದರೆ, ಅಲ್ಲಿ ಯಾರೋ ವ್ಯಕ್ತಿಗಳು ಅಥವಾ ಪ್ರಾಣಿಗಳು ಬಂದಿವೆಯೆಂದರ್ಥ. ಧೂಳು ಏಳುತ್ತಿದ್ದರೆ, ಪ್ರಾಣಿಗಳು, ಮನುಷ್ಯರು ಅಥವಾ ವಾಹನಗಳು ಚಲಿಸುತ್ತಿವೆಯೆಂದರ್ಥ.

ಹೆಚ್ಚು ಧೂಳಿದ್ದರೆ ಹೆಚ್ಚು ಜನರು ಓಡಾಡುತ್ತಿದ್ದಾರೆಂದೇನು ಅರ್ಥ ಮಾಡಬೇಕಾಗಿಲ್ಲ. ಶತ್ರು ಸೈನ್ಯದ ಗಮನವನ್ನು ಸೆಳೆದು ಅಶ್ವ ಸೈನ್ಯವು ಚಲಿಸುತ್ತಿದೆಯೆಂಬ ಭ್ರಮೆಯನ್ನುಂಟುಮಾಡಲು ಅಶ್ವಾರೋಹಿಯು ಒಬ್ಬನೇ ಆದರೂ ಧೂಳಿನ ರಸ್ತೆಯಲ್ಲಿ ಮರದ ಕೊಂಬೆಗಳನ್ನೆಳೆದು ಆ ರೀತಿ ಧೂಳೆಬ್ಬಿಸಲಾಗುತ್ತದೆ.

ಹಳ್ಳಿಗಾಡಿನಲ್ಲಿದ್ದರೂ ಸಹ, ನಗರದ ಪ್ರದೇಶದಂತೆಯೇ, ಜನರ ಮುಖಚರ್ಯೆ, ಅವರ ಉಡಿಗೆ ತೊಡಿಗೆ, ನಡೆಯುವ ರೀತಿ ಇತ್ಯಾದಿ ವಿಷಯಗಳನ್ನು ಗಮನಿಸಬೇಕು. ಅವರ ಹೆಜ್ಜೆಯ ಗುರುತುಗಳನ್ನು ಗಮನಿಸಿ, ಪುಸ್ತಕದಲ್ಲಿ ಅದನ್ನು ಚಿತ್ರರೂಪದಲ್ಲಿ ಬರೆದುಕೊಳ್ಳಿ, ಈ ಪುಸ್ತಕದ ಪ್ರಾರಂಭದಲ್ಲಿ ಕುರಿಕಾಯುವ ಬಾಲಕನ ಕತೆಯಲ್ಲಿ ಹೇಳಿದಂತೆ, ಅದು ನಿಮಗೆ ಯಾವಾಗಲೋ ಉಪಯೋಗಕ್ಕೆ ಬರಬಹುದು.

ಪ್ರಾಣಿಗಳ, ಪಕ್ಷಿಗಳ ವಾಹನಗಳ ಚಕ್ರಗಳ ಗುರುತುಗಳನ್ನೂ ಗಮನಿಸಿ, ಇವುಗಳಿಂದ ನಿಮಗೆ ಅಮೂಲ್ಯವಾದ ಸಮಾಚಾರವು ತಿಳಿಯಬಹುದು.

ಜಾಡು ಹಿಡಿಯುವುದು ಬಹಳ ಮುಖ್ಯವಾದ ವಿಷಯವಾದುದರಿಂದ ಅದನ್ನು ಪ್ರತ್ಯೇಕವಾದ ಒಂದು ಶಿಬಿರಾಗ್ನಿ ಉದಂತವಾಗಿ ವಿವರಿಸುತ್ತೇನೆ.

## ನಿಮ್ಮ ಕಣ್ಣುಗಳನ್ನು ಉಪಯೋಗಿಸುವುದು :

ನೀವು ಗಮನಿಸುವ ವಸ್ತುವು, ಯಾವುದೂ ಸಣ್ಣ ವಸ್ತುವಲ್ಲ. ಸಣ್ಣ ಗುಂಡಿ, ಬೆಂಕಿಕಡ್ಡಿ, ಸಿಗಾರ್‌ನ ಬೂದಿ, ಹಕ್ಕಿಯ ಗರಿ, ಎಲೆ ಇವೇ ಮುಂತಾದ, ಎಷ್ಟೇ ಸಣ್ಣ ವಸ್ತುವಾದರೂ, ಅದು ಬಹಳ ಮಹತ್ವವುಳ್ಳದ್ದಾಗಿರುತ್ತದೆ.

ಸ್ಕೌಟಾದವನು ಮುಂದೆ ಮಾತ್ರ ನೋಡಿಕೊಂಡು ಹೋಗುವುದಲ್ಲದೆ, ಅಕ್ಕಪಕ್ಕಗಳಲ್ಲಿಯೂ ಹಿಂದುಗಡೆಯೂ ಸಹ ಗಮನಹರಿಸಬೇಕು. ನಾಣ್ನುಡಿಯು ಹೇಳುವಂತೆ, ಅವನ ತಲೆಯ ಹಿಂಭಾಗದಲ್ಲಿಯೂ ಕಣ್ಣುಗಳಿರಬೇಕು.

ಕೆಲವೊಮ್ಮೆ ಇದ್ದಕ್ಕಿದ್ದಂತೆ, ಹಿಂದಕ್ಕೆ ತಿರುಗಿದರೆ, ಶತ್ರುವಿನ ಕಡೆಯ ಬೇಹುಗಾರನೋ ಅಥವಾ ಕಳ್ಳನೋ ಹಿಂಬಾಲಿಸುತ್ತಿರುವುದನ್ನು ಕಾಣಬಹುದು. ನೀವು ಹಾಗೆ ಇದ್ದಕ್ಕಿದ್ದಂತೆ, ಹಿಂತಿರುಗಿ ನೋಡುವಿರೆಂದು ತಿಳಿದಿದ್ದರೆ, ಅವನು ಆ ರೀತಿಯಲ್ಲಿ ಹಿಂಬಾಲಿಸುತ್ತಿರಲಿಲ್ಲ.

ಫೆನಿಮೋರ್ ಕೂಪರ್ ಅವರ "ದಿ ಪಾತ್ ಫೈಂಡರ್" (The 'Path Finder') ಎಂಬ ಒಂದು ಸ್ವಾರಸ್ಯಕರ ಕತೆಯಿದೆ. ಅದರಲ್ಲಿ ರೆಡ್ ಇಂಡಿಯನ್ ಸ್ಕೌಟ್‌ನನ್ನು ವಿವರಿಸಲಾಗಿದೆ. ಅವನಿಗೆ ತಲೆಯ ಹಿಂದೆ ಕಣ್ಣುಗಳಿದ್ದುವು. ಅವನು ಸ್ವಲ್ಪ ದೂರ, ಆ ಕುರುಚಲು ಕಾಡಿನಲ್ಲಿ, ಹೋದಬಳಿಕ, ಹೊಚ್ಚಹೊಸ ಹಸಿರೆಲೆಗಳ ಮಧ್ಯದಲ್ಲಿ ಒಂದೆರಡು ಬಾಡಿದ ಎಲೆಗಳನ್ನು ಕಂಡನು. ಅಲ್ಲಿ ಯಾರೋ ಉತ್ತಮ ರೀತಿಯಲ್ಲಿ ಅವಿತುಕೊಳ್ಳಲು ಆ ರೀತಿ ಮಾಡಿದ್ದಾರೆಂದು ಅನುಮಾನಿಸಿದನು. ಅಲ್ಲಿಯೇ ಅವಿತುಕೊಂಡಿದ್ದ ಕೆಲವು ದೇಶ ಭ್ರಷ್ಟರನ್ನು ಕಂಡುಹಿಡಿದನು.

## ರಾತ್ರಿಯ ವೇಳೆಯ ಸ್ಕೌಟಿಂಗ್ :

ಸ್ಕೌಟ್ ಆದವನು ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲೀ, ಕುರುಹುಗಳನ್ನು ಸೂಕ್ಷ್ಮವಾಗಿ ಗಮನಿಸುವಂತಿರಬೇಕು. ರಾತ್ರಿಯ ವೇಳೆಯಲ್ಲಾದರೆ ಕೇಳಿಸಿಕೊಳ್ಳುವುದರಿಂದ, ಮುಟ್ಟಿ ನೋಡುವುದರಿಂದ ಮತ್ತು ಮೂಸಿ ನೋಡುವುದರಿಂದ ಗಮನಿಸಬೇಕಾಗುತ್ತದೆ.

ರಾತ್ರಿಯ ನೀರವತೆಯಲ್ಲಿ, ಶಬ್ದವು ಹಗಲಿಗಿಂತಲೂ ದೂರಕ್ಕೆ ಕೇಳಿಸುತ್ತದೆ. ನೀವು ನೆಲಕ್ಕೆ ಕಿವಿಯನ್ನು ಆನಿಸಿದರೆ ಅಥವಾ ನೆಲದ ಮೇಲಿರುವ ಕೋಲು ಅಥವಾ ಡ್ರಂಗಳಿಗೆ ಆನಿಸಿದರೆ, ಸುಮಾರು ದೂರದಲ್ಲಿ ನಡೆಯುತ್ತಿರುವ ಕುದುರೆಗಳ ಖರಪುಟ ಧ್ವನಿಯನ್ನೂ ಮನುಷ್ಯರ ಭಾರವಾದ ಹೆಜ್ಜೆಗಳ ಶಬ್ದವನ್ನೂ, ಸ್ಫುಟವಾಗಿ ಕೇಳಿಸಿಕೊಳ್ಳಬಹುದು.

ಇನ್ನೊಂದು ರೀತಿಯೆಂದರೆ ಚಾಕುಗಳನ್ನು ಎರಡೂ ಕಡೆಗಳಿಗೆ ತೆರೆಯುವುದು. ಒಂದು ಭಾಗವನ್ನು ನೆಲದಲ್ಲಿ ಚುಚ್ಚುವುದು. ಇನ್ನೊಂದು ಭಾಗವನ್ನು ಹುಷಾರಾಗಿ ಹಲ್ಲಿನಲ್ಲಿ ಕಚ್ಚಿ ಹಿಡಿದರೆ, ಶಬ್ದವು ಬಹಳ ಚೆನ್ನಾಗಿ ಕೇಳಿಬರುತ್ತದೆ.

ಮಾತಿನ ಶಬ್ದವು ಎಷ್ಟೇ ಪಿಸುಗುಟ್ಟಿದರೂ, ಸುಮಾರು ದೂರಕ್ಕೆ ಕೇಳಿ ಬರುವುದಲ್ಲದೆ, ಅದನ್ನು ಬೇರೆ ಯಾವ ಶಬ್ದಕ್ಕೂ, ತಪ್ಪಾಗಿ ಗ್ರಹಿಸುವ ಸಾಧ್ಯತೆ ಇರುವುದಿಲ್ಲ.

ನಾನು ಅನೇಕ ವೇಳೆಗಳಲ್ಲಿ, ರಾತ್ರಿಯ ಸಮಯದಲ್ಲಿ ಕಾವಲು ಠಾಣೆಗಳನ್ನು ಹಾದು ಹೋಗುವಾಗಿ, ಕಾವಲುಗಾರರು ಪಿಸುಮಾತಿನಲ್ಲಿ, ತೊಡಗಿರುವುದನ್ನೋ ಅಥವಾ ಮಲಗಿ ಗೊರಕೆ ಹೊಡೆಯುತ್ತಿರುವುದನ್ನೋ ಕೇಳಿಸಿಕೊಂಡಿದ್ದೇನೆ.

ಮುಂದುವರೆಯುತ್ತದೆ.....






**11 ರಿಂದ 30 ಏಪ್ರಿಲ್ 2016ರ ವರೆಗೆ ಮೈಸೂರು ಜಿಲ್ಲಾ ಸಂಸ್ಥೆ ಆಯೋಜಿಸಿದ್ದ "ರಜಾ–ಮಜಾ" ಬೇಸಿಗೆ ಶಿಬಿರದ ಉದ್ಘಾಟನೆಯನ್ನು ಪಾಂಡವಪುರದ ಶ್ರೀ ಚಕ್ರೇಶ್ವರಿ ಪೀಠದ ಶ್ರೀ ಶ್ರೀ ಅವದೂತಸಿಂಹ ವಿದ್ಯಾಹಂಸ ಭಾರತಿ ಸ್ವಾಮಿಗಳು ಉದ್ಘಾಟಿಸಿ ಮಾತನಾಡುತ್ತಿರುವುದು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳಾದ ಶ್ರೀ ಪಿ. ವಿಶ್ವನಾಥ್ ಶ್ರೀ ಎಸ್. ರವಿಶಂಕರ್, ಡಾ. ಕೆ.ಬಿ. ಗುರುಮೂರ್ತಿ ಶ್ರೀಮತಿ ರಾಧಮ್ಮ, ಶ್ರೀ ಅಜಯ್ ಕುಮಾರ್ ಜೈನ್ ಹಾಗೂ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸಿರುವ ಚಿಣ್ಣರು.**

**06 ಏಪ್ರಿಲ್ 2016 ಕೊಡಗು ಜಿಲ್ಲೆ ವಿರಾಜಪೇಟೆ ತಾಲ್ಲೂಕಿನ ಚನ್ನನಕೋಟೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಜರುಗಿದ ಸ್ಕೌಟ್ ಘಟಕದ ದೀಕ್ಷಾ ಸಮಾರಂಭದ ಉದ್ಘಾಟನೆಯನ್ನು ಶಾಲಾ ದಾನಿಗಳಾದ ಶ್ರೀ ಪೊನ್ನಪ್ಪನವರು ಸಸಿಗೆ ನೀರೆರೆಯುವುದರ ಮೂಲಕ ನೆರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಜಿಮ್ಮಿ ಸಿಕ್ವೇರ, ಶ್ರೀ ಗಣೇಶ್, ಶ್ರೀ ಮುರುವಂಡ ಗಣಪತಿ ಹಾಗೂ ಇತರರು ಚಿತ್ರದಲ್ಲಿದ್ದಾರೆ.**






**Participants of the "Summer Camp" organised by HAL Rover Crew from 18 to 23rd April 2016 for Unprivelged Children of HAL Employees with Dr. Ramani Raju, Chief Patron, HAL Welfare Association, Sri Prem Sagar Manager (Security) and Sri P. Nanda Kumar, Leader of the Crew and others are seen in the Picture.**

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340
Posted at: Bengaluru PSO, Mysore Road, Bengaluru-26 on 28 & 30 every Month (No. of Pages : 04+20 = 24)

26 ರಿಂದ 30 ಏಪ್ರಿಲ್ 2016ರ ವರೆಗೆ ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರ ದೊಡ್ಡಬಳ್ಳಾಪುರದಲ್ಲಿ ಜರುಗಿದ ರಾಷ್ಟ್ರಪತಿ ಸ್ಕೌಟ್ಸ್ ಪೂರ್ವಭಾವಿ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್‌ಗಳು ಹಾಗೂ ಸಿಬ್ಬಂದಿ ವರ್ಗ.



If not delivered, please return to :
**THE EDITOR, Karnataka Scout & Guide**
**State Headquarters, Shanthi Gruha**
**#39, Palace Road, Bengaluru - 560 001**
**Ph.: 080-22260017**
**e-mail.: shq@bsgkarnataka.org**
**editor@bsgkarnataka.org**
**www.bsgkarnataka.org**

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross
2nd Main, Kasturiba Nagar, Mysore Road, Bengaluru-26